Photo by Pranlal K. Patel




ಬಹುಮಾನ ಪಡೆದ ಶೀರ್ಷಿಕೆ

ಶುದ್ಧೀಕರಿಸುತ್ತಾ

ಕಳಿಸಿದವರು:
ಬಿ. ಎನ್. ನಾಗೇಂದ್ರ, ಬೆಂಗಳೂರು. 3.

ಲಲಿತ... ಸಾವಿತ್ರಿ
ನಾಗೇಶ್ವರರಾವ್
ರಂಗರಾವ್..ನಂಬಿಯಾರ್
ಸಿ.ಎಸ್.ಆರ್.

ವಿನೋದಾ ರವರ

# ದೇವದಾಸು

ತಮಿಳು-ತೆಲುಗು

ನಿರ್ದೇಶನ
ವೇದಾಂತಂ ರಾಘವಯ್ಯ



## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ....ಮದ್ರಾಸ್-26.



భరణీ వారి

# చండీరాణి

భానుమతి

రామారావు...రంగారావు...రేలంగి



Studio... BHARANI

డైరెక్షన్.... భానుమతి ••• నిర్మాత... రామకృష్ణ

DISTRIBUTORS FOR MYSORE:

**VIJAYA TALKIE DISTRIBUTORS, BANGALORE-2**

# ಚಂದಮಾಮ

ಂಚಾಲಕರು:
‘ಚಕ್ರಪಾಣಿ’

**ಹ**ನ್ನೊಂದನೆಯ ಸಂಪುಟದಲ್ಲಿ ಇದು ಮೊದಲನೇ ಸಂಚಿಕೆ. ಈ ಸಂಚಿಕೆಯ ಪುಟದಲ್ಲಿ ಚಿತ್ರಿತವಾದುದು ಕಡಲ ಪಯಣದಲ್ಲಿರುವ ನೌಕೆ. ಇದೇ ಸಂಸಾರನೌಕೆ. ಚಂದ್ರನು ನೌಕೆಯ ಮೇಲೆ ಹಾಲುಕಿರಣ ಸುರಿಸುತ್ತಿದ್ದಾನೆ. ಈ ಪಯಣ ನಿಮಗೆ ಆಹ್ಲಾದಕರವಾಗಿದ್ದೀತಲ್ಲವೆ? ಇನ್ನೊಂದು ಸಂತಸದ ಸುದ್ದಿ: ಫೋಟೋ ಶೀರ್ಷಿಕೆ ಸ್ಪರ್ಧೆಗೆ ‘ಕೂಪನ್ ಪದ್ಧತಿ’ ನಿಲ್ಲಿಸಿದ್ದೇವೆ. ಅನೇಕರು ಅನಾವಶ್ಯಕವಾಗಿ ೨ ಆಣೆ ಕವರಿನಲ್ಲಿ ಕಳಿಸುವುದರಿಂದಲೂ, ಕೂಪನ್ ಹರಿಯುವುದರಿಂದ ಪುಸ್ತಕದ ಅಂದ ಕೆಡುವುದೆಂದು ಅನೇಕರು ಪತ್ರ ಬರೆದುದರಿಂದಲೂ ಹೀಗೆ ಮಾಡಬೇಕಾಯಿತು. ಇನ್ನು ಮುಂದೆ ‘ಶೀರ್ಷಿಕೆ’ ಗಳನ್ನು ಮೊದಲಿನಂತೆ ಪೋಸ್ಟ್ ಕಾರ್ಡಿನಲ್ಲಿಯೇ ಬರೆದು ಕಳಿಸಿರಿ.

ಸಂಪುಟ ೧೧ : ಜೂಲೈ ೧೯೫೯ : ಸಂಚಿಕೆ ೧

# ಗಿಡನೆಟ್ಟ ಮುದುಕ

ಮೂರ್ಮಂದಿ ಬಾಲಕರು ನಡೆಯುತಿರೆ ಮುಂದು
ತೋರಿ ಬಂತು ವಿಚಿತ್ರ ನೋಟ ವೊಂದು.
ಹಣ್ಣು ಮುದುಕನು ಒಬ್ಬ ದಾರಿ ಬದಿಯಲ್ಲಿ
ಕುಳಿತು ಗಿಡವೊಂದ ನೆಡುತಿದ್ದನಲ್ಲಿ

ಬೇಗದಲ್ಲೇ ಬೀಳ್ವ ಹಣ್ಣು ಮುದಕನಿವ
ಏಕೆಗೈವನೋ ಸುಮ್ಮನೀ ಕೆಲಸವ?
ತಲೆಕೆಟ್ಟವನೊ!' ಎಂದು ಕೊಂಡು ತಮ್ಮೊಳಗೆ
ಬಾಲಕರು ಬಂದರಾ ಅಜ್ಜಯನ ಬಳಿಗೆ.






'ಏನಿದಜ್ಜಯ್ಯ ನೀವ್ ಗಿಡ ನೆಡುವುದೇಕೆ?
ಎಷ್ಟುದಿನ ಬದುಕೀರೋ! ಶ್ರಮ ಸುಮ್ಮನೇಕೆ?
ರಾಮಕೃಷ್ಣಾ ಎಂದು ಕೂತುದಿನ ಕಳೆಯದೆ
ಈ ಕಷ್ಟ ಬಡುವುದೇಕಯ್ಯ ಬರಿದೆ?

ನಾವ್ ಕಷ್ಟಪಟ್ಟರೂ ಅದಕರ್ಥವುಂಟು.
ನಾವ್ ಆಶೆ ಪಟ್ಟರೂ ಸಫಲವುಂಟು.
ನಿಮಗೇನಿದೇ!' ಎಂದು ನಕ್ಕ ಹುಡುಗರಿಗೆ
ಮುದುಕ ನಿಂತೆಂದ 'ಗೊತ್ತಿಲ್ಲ ನಿಮಗೆ ;

ಕಷ್ಟಪಟ್ಟರೆ ತಾನೆ ಇಷ್ಟಬಹುದಯ್ಯ !
ಗಿಡ ನೆಟ್ಟರೇ ಹಣ್ಣು ಸಿಕ್ಕುತ್ತದಯ್ಯ !
ಒಳ್ಳೆ ಕೆಲಸಕ್ಕೆ ಶ್ರಮ ಪಡಲೇನು ನಷ್ಟ?
ಮುಂದೆ ಫಲ ಕೊಂಬವರ ನೆನಪೆ ನನ್ನಿಷ್ಟ.

ನಾನೆಟ್ಟ ಈ ಗಿಡವು ಬೆಳೆದು ಮರವಾಗಿ
ನೆರಳಿತ್ತು ಹೂವಾಗಿ, ಮಿಡಿ–ಕಾಯಿಯಾಗಿ
ಮಕ್ಕಳೋ ಮೊಮ್ಮಕ್ಕಳೋ ಮುಂದಿನವರು
ಸುಖಪಡಲಿ ಸಾಕು, ನೆನೆದೆನ್ನ ಹೆಸರು.

ನೆರಳಿನಲಿಕೂಡುವರು, ಹಣ್ಣ ಕೊಯ್ಯುವರು.
ಅದ ತಿನುತೆ ಸವಿಯಾಗಿ ನನ್ನ ನೆನೆಯುವರು
ಇದಕಿಂತ ಹೆಚ್ಚೇನು ಬೇಕು ಹೇಳಿ?
ಈ ಪುಣ್ಯವಂತನೇ ಭಾಗ್ಯಶಾಲಿ!

ಎಷ್ಟುದಿನ ಬದುಕೇನು ಎಂದು ಹೇಳುವಿರಾ?
ಯಾರಿಗೆಷ್ಟಾಯುಷ್ಯ ನೀವ್ ಬಲ್ಲಿರಾ?
ಚಿಕ್ಕವರು ತಾವೆಂದು ಹೀಗೆನ್ನಬಹುದೆ?
ಕಾಲನಾಕರೆಯ ನರಿತವನಾರು ಜಗದೆ?'



"ನವಗಿರಿನಂದ"

ಹುಡುಗರಿದಕೇಳಿ ತೆರಳಿದರು ಮೌನದಲಿ.
ಮುದುಕ ನುಡಿದಂತೆಯೇ ಕೆಲಕಾಲದಲ್ಲಿ,
ಒಬ್ಬ ಹುಡುಗನು ಸತ್ತ ಬೆಂಕಿಗಂಡದಲಿ.
ಇನ್ನೊಬ್ಬಸತ್ತ ನೀರಿನ ಗಂಡದಲ್ಲಿ.

ಮೂರನೇ ಹುಡುಗ ಮರದಿಂ ಬಿದ್ದು ಸತ್ತ.
ಮುದುಕನಾ ಮಾತು ನಿಜವಾಯ್ತು!–ವಿಚಿತ್ರ!
ಅವನ ಸಂತತಿಗಳವನೆಟ್ಟ ಮರದಿಂದ
ಫಲಪ್ರಯೋಜನ ಪೊಂದಿದರು ನೋದದಿಂದ.



# ಮುಖಚಿತ್ರ

ಪಾಂಡವರೈವರನ್ನೂ ಹೇಗಾದರೂ ನಾಶಪಡಿಸಬೇಕೆಂದು ದುರ್ಯೋಧನನು ತನ್ನ ಪರಿವಾರದೊಂದಿಗೆ ಎಷ್ಟೋ ಯೋಚನೆ ಮಾಡಿದನು. ಶಕುನಿ, ಪುರೋಚನ ಮೊದಲಾದವರ ಯೋಚನೆಯಮೇರೆಗೆ ಕನಕನೆಂಬ ಶಿಲ್ಪಿಯನ್ನು ಬರಮಾಡಿ, ಒಂದು ಅಪೂರ್ವವಾದ ಅರಮನೆಯನ್ನು ಕಟ್ಟಿಸಿದನು ದುರ್ಯೋಧನ. ಬೆಂಕಿ ಮುಟ್ಟಿದರೆ ಭಗ್ಗನೆ ಹೊತ್ತಿಕೊಳ್ಳುವಂತಹ ಅರಗಿನ ಮನೆಯದು.

ಪಾಂಡವರನ್ನು ಈ ಮನೆಯಲ್ಲಿ ವಾಸಮಾಡುವಂತೆ ಧೃತರಾಷ್ಟ್ರನಿಂದಲೇ ಕೌರವನು ಹೇಳಿಸಿದನು. ಸರಳರಾದ ಪಾಂಡವರೈವರೂ ದೊಡ್ಡಪ್ಪನ ಮಾತಿಗೆ ಗೌರವಕೊಟ್ಟು ಕುಂತೀದೇವಿಯೊಂದಿಗೆ ಒಂದು ಶುಭದಿನದಲ್ಲಿ ಆ ಮನೆಗೆ ಒಕ್ಕಲು ಹೋದರು.

ಈ ಗುಟ್ಟೆಲ್ಲವೂ ಕನಕನೆಂಬ ಶಿಲ್ಪಿಗೆ ಗೊತ್ತೇ ಇತ್ತು. ಅವನ ಮೂಲಕವಾಗಿ ವಿದುರನಿಗೂ ತಿಳಿಯಿತು. ವಿದುರನೂ ಅವನೂ ಯೋಚಿಸಿ ಆ ಮನೆಯೊಳಗೆ ಗುಟ್ಟಾಗಿ ಒಂದು ಸುರಂಗವನ್ನು ನಿರ್ಮಿಸಿಟ್ಟಿದ್ದರು. ಅದರಲ್ಲಿ ಹೊಕ್ಕುಬಿಟ್ಟರೆ, ಬಹುದೂರವಿರುವ 'ಹಿಡಿಂಬವನ'ವನ್ನು ಸೇರಬಹುದು. ಈ ರಹಸ್ಯವನ್ನೆಲ್ಲಾ ವಿದುರನು ಭೀಮನಿಗೆಮಾತ್ರವೇ ಹೇಳಿ, ದುರ್ಯೋಧನನು ಆ ಮನೆಗೆ ಯಾವ ದಿನ ಬೆಂಕಿಕೊಡಿಸಬೇಕೆಂದಿರುವನೋ ಆ ವೇಳೆಯನ್ನು ಸಹ ತಿಳಿಸಿದನು.

ಆ ದಿನ ರಾತ್ರಿ ಭೀಮನುಮಾತ್ರ ನಿದ್ರಿಸಲಿಲ್ಲ. ಕುಂತಿಯೂ ಉಳಿದ ಪಾಂಡವರೂ ಮಲಗಿ ನಿದ್ರಿಸಿದರು. ಭೀಮನು ಮೆಲ್ಲನೆ ಜಗಲಿಗೆ ಬಂದು ನೋಡಿದನು. ದುರ್ಯೋಧನನ ಕೈಯಾಳಾದ ಪುರೋಚನನು—ಬೆಂಕಿ ಹಚ್ಚಲಿಕ್ಕೆ ಬಂದವನು—ಜಗಲಿಯಲ್ಲಿ ನಿದ್ದೆಮಾಡುತ್ತಿದ್ದನು. ಇದೇ ಸಮಯವೆಂದುಕೊಂಡು ಭೀಮನು ಅಡಿಗೇ ಮನೆಯಿಂದ ಬೆಂಕಿಯ ಕೊಳ್ಳಿಯನ್ನು ತಂದು ಮನೆಯ ಗೋಡೆಗೆ ಬೆಂಕಿ ತಾಗಿಸಿಬಿಟ್ಟನು. ಮತ್ತು ಕೂಡಲೇ, ತಾಯಿಯನ್ನು ತಲೆಯಮೇಲೆಯೂ, ಅಣ್ಣನನ್ನೂ, ಅರ್ಜುನನನ್ನೂ ಎರಡು ತೋಳುಗಳಮೇಲೆಯೂ, ನಕುಲಸಹದೇವರನ್ನು ಕಂಕುಳಲ್ಲಿಯೂ ಎತ್ತಿಕೊಂಡು ಸುರಂಗದೊಳಗೆ ಧುಮುಕಿ ಪಾರಾಗಿಬಿಟ್ಟನು. ಬೆಳಗಾಗುವುದರೊಳಗೇ ಹಿಡಿಂಬವನದಲ್ಲಿ ಮೇಲೆದ್ದು ಇನ್ನೂ ನಿದ್ದೆಯಲ್ಲಿರುವ ತಾಯಿಯನ್ನೂ ಅಣ್ಣತಮ್ಮಂದಿರನ್ನೂ ಮೆಲ್ಲನೆ ಹುಲ್ಲಮೇಲೆ ಮಲಗಿಸಿದನು.

ಇಲ್ಲಿ ಅರಗಿನ ಅರಮನೆ ನಿಮಿಷಮಾತ್ರದಲ್ಲಿ ಬೆಂಕಿಸುತ್ತಿಕೊಂಡು ಸುಟ್ಟು ಬೂದಿಯಾಗಿ ಹೋಯಿತು. ಆ ರಾತ್ರಿ ಆ ಅರಮನೆಯಲ್ಲಿ ನಾಡಿಗೆ ಕೇಡುಬಗೆಯುವ ಐವರು ಬೇಡರೂ ತಮ್ಮ ತಾಯಿಯೊಂದಿಗೆ ಮಲಗಿದ್ದರು. ಅವರೂ ಪುರೋಚನನೂ ಮನೆಯೊಂದಿಗೆ ಸುಟ್ಟು ಬೂದಿಯಾಗಿ ಹೋದರು. ಅವರ ಹೆಣಗಳನ್ನು ನೋಡಿ, ಪಾಂಡವರೂ ಕುಂತಿಯೂ ಸುಟ್ಟುಹೋದರೆಂದು ಎಲ್ಲೆಲ್ಲಿಯೂ ವಾರ್ತೆ ಹರಡಿತು.




# ಲಂಚಕುಳಿ

**ಕಾ**ಶೀನಗರವನ್ನು ಬ್ರಹ್ಮದತ್ತನು ಆಳುತ್ತಿದ್ದ ಕಾಲದಲ್ಲಿ ಬೋಧಿಸತ್ವನು ಆಸ್ಥಾನ ಕ್ರಯಾಧಿಕಾರಿಯಾಗಿದ್ದ. ಕ್ರಯಾಧಿಕಾರಿ ಎಂದರೆ ರಾಜ್ಯಕ್ಕೆ, ಅರಮನೆಗೆ ಬೇಕಾಗುವ ವಸ್ತುವಾಹನಗಳನ್ನು ಕೊಳ್ಳುವುದರಲ್ಲೂ, ಅವುಗಳ ಬೆಲೆ ನಿರ್ಣಯಿಸುವುದರಲ್ಲೂ ಸಿದ್ಧನಾದವನೆಂದು ಹೇಳಬಹುದು.

ಬೋಧಿಸತ್ವನು ಕಾಶೀನಗರಕ್ಕೆ ಬೇಕಾದ ಆನೆ, ಕುದುರೆ, ಬೆಳ್ಳಿಬಂಗಾರಗಳನ್ನು ಪರೀಕ್ಷೆ ಮಾಡಿ, ಬೆಲೆಕಟ್ಟಿ, ತನ್ನ ಅಂದಾಜಿನ ಪ್ರಕಾರ ಅವುಗಳನ್ನು ತಂದ ವ್ಯಾಪಾರಿಗಳಿಗೆ ಹಣ ಕೊಡಿಸುತ್ತಿದ್ದನು.

ಕಾಶೀನಗರದ ರಾಜನಾದ ಬ್ರಹ್ಮದತ್ತನು ಕಡು ಲೋಭಿ. ಆತನಿಗೆ ಒಂದುಸಾರಿ ಒಂದು ಅನುಮಾನವುಂಟಾಯಿತು. "ಈ ಕ್ರಯಾಧಿಕಾರಿ ಪ್ರತಿಯೊಂದಕ್ಕೂ ಹೆಚ್ಚು ಬೆಲೆ ಕೊಡಿಸಿ ಕೊಡುತ್ತಿರುವಂತೆ ಕಾಣಿಸುವುದು. ಹೀಗಾದರೆ ನನ್ನ ರಾಜ್ಯ ಕೆಲವು ದಿನಗಳಲ್ಲೇ ದಿವಾಳಿಯಾಗುತ್ತದೆ" ಎಂದು ಮನದಲ್ಲಿ ಅಂದುಕೊಂಡ. ಹಾಗೇ ಯೋಚಿಸುತ್ತಾ ತನ್ನ ಕೊಠಡಿಯ ಕಿಟಿಕಿಯ ಬಾಗಿಲನ್ನು ತೆಗೆದು ಒಂದುಸಾರಿ ಹಿತ್ತಲ ಕಡೆ ನೋಡಿದ.

ಅಲ್ಲಿ ಅನೇಕರು ನಿಂತಿದ್ದರು. ರಾಜನದೃಷ್ಟಿ ಒಬ್ಬನ ಮೇಲೆ ಬಿತ್ತು. ಮರು ಆಲೋಚನೆಯಿಲ್ಲದೆ ಅವನನ್ನು ಕೂಗಿದ.

ಕುಲಗೋತ್ರಗಳಿಲ್ಲದ ಅವನನ್ನು ಕೂಡಲೇ ಬೋಧಿಸತ್ವನ ಜಾಗದಲ್ಲಿ ನೇಮಿಸಿದ. ಈ ಹೊಸಬನು ತನ್ನ ಚಾಕಚಕ್ಯತೆಯಿಂದ ವಸ್ತುಗಳ ದರವನ್ನು ತನಗೆ ಲಾಭ ಬರುವಂತೆ ನಿರ್ಣಯಿಸುವನೆಂದು ರಾಜ ಎಣಿಸಿದ್ದ. ಆದರೆ ಈ ಕ್ರಯಾಧಿಕಾರಿ ಶುದ್ಧ ತಿಳಿಗೇಡಿ.

ಈತನಿಗೆ ವಸ್ತುಗಳ, ಅವುಗಳ ಗುಣಾವಗುಣಗಳಾಗಲೀ, ಅವುಗಳಿಗೆ ಬೆಲೆ ಕಟ್ಟುವ ರೀತಿಯಾಗಲೀ ತಿಳಿಯದು. ವಸ್ತುಸಾಮಗ್ರಿಗಳನ್ನು ವ್ಯಾಪಾರ ಮಾಡಬೇಕಾಗಿ ಬಂದಾಗ ತನ್ನ ಬುದ್ಧಿಗೆ ತೋಚಿದಷ್ಟು ಕೇಳುತ್ತಿದ್ದ.

ಎಚ್. ನಾರಾಯಣರಾವ್




ಒಂದು ಸರಿಯಾದ ಪದ್ಧತಿಯಾಗಲೀ, ಕ್ರಮ ವಾಗಲಿ ಇರುತ್ತಿರಲಿಲ್ಲ.

ಆದರಿಂದಾಗಿ ವ್ಯಾಪಾರಿಗಳಿಗೆ ಬಹು ಶೀಕ ನಷ್ಟವಾಗುತ್ತಿತ್ತು. ಅವರೇನುತಾನೇ ಮಾಡಲಾಪರು? ವ್ಯಾಪಾರ ಮಾಡುತ್ತಿದ್ದುದು ರಾಜನ ಆಸ್ಥಾನದ ಅಧಿಕಾರಿಯಾದುದರಿಂದ ಪ್ರತಿಹೇಳದೆ ಕೊಟ್ಟ ಹಣವನ್ನು ತೆಗೆದು ಕೊಂಡು ಹೋಗುತ್ತಿದ್ದರು. ತಮಗಾದ ಅನ್ಯಾಯ, ನಷ್ಟಗಳನ್ನು ಯಾರೊಂದಿಗೂ ಹೇಳಿಕೊಳ್ಳಲು ಅವಕಾಶವೇ ಇರಲಿಲ್ಲ.

ಒಂದು ದಿನ ವಿದೇಶದಿಂದ ವರ್ತಕ ನೊಬ್ಬನು ಐನೂರು ಉತ್ತಮ ಜಾತಿ ಕುದುರೆ ಗಳನ್ನು ಸಾಗಿಸಿಕೊಂಡು ಕಾಶೀರಾಜನ ಹತ್ತಿರ ಬಂದ. ರಾಜನು ತನ್ನ ಕ್ರಯಾಧಿಕಾರಿಯನ್ನು ಕರೆದು ಆ ಕುದರೆಗಳ ಬೆಲೆ ಕಟ್ಟುವಂತೆ ಹೇಳಿದ.

ಕ್ರಯಾಧಿಕಾರಿ ಬಂದು ಆ ಕುದುರೆಗಳನ್ನು ಪರೀಕ್ಷಿಸಿ "ಸರಿಸರಿ, ಈ ಕುದುರೆ ತಂದ ವರ್ತಕನಿಗೆ ಒಂದು ಹಿಡಿ ಅಕ್ಕಿಕೊಟ್ಟು ಕಳು ಹಿಸಿ. ಕುದುರೆಗಳನ್ನು ಅಶ್ವಶಾಲೆಯಲ್ಲಿ ಕಟ್ಟಿ ಹಾಕಿ" ಎಂದು ಆಜ್ಞಾಪಿಸಿದ.

"ಅಯ್ಯೋ ದೈವವೇ" ಎಂದು ಗೋಳಾ ಡುತ್ತಾ ಅಲ್ಲಿಂದ ಹೊರಟು ಸೆಟ್ಟಿಗೆ ಹಿಂದೆ ಕ್ರಯಾಧಿಕಾರಿಯಾಗಿದ್ದ ಬೋಧಿಸತ್ವನ ಮನೆ ಸೇರಿದ.

ತನಗೆ ಆದ ಅನ್ಯಾಯವನ್ನು ಆತನಿಗೆ ತಿಳಿಸಿ, ತನಗೆ ನ್ಯಾಯವಾಗಿ ಬರಬೇಕಾದ ಹಣ ಸಲ್ಲುವಂತೆ ಕೊಡಿಸಿಕೊಡಬೇಕೆಂದು ತುಂಬಾ ವಿನಯದಿಂದ ಪ್ರಾರ್ಥಿಸಿದ.

ಆಗ ಬೋಧಿಸತ್ವನು ಸಂಗತಿ ಸಂದರ್ಭ ಗಳನ್ನು ಕೇಳಿ "ಅಪ್ಪಾ, ಒಂದು ಕೆಲಸ ಮಾಡು. ಅಧಿಕಾರಿಯನ್ನು ತೃಪ್ತಿಪಡಿಸಲು ಮೊದಲು ಆತನಿಗೆ ಲಂಚ ಕೊಡು. ಆತರು ವಾಯ 'ಸ್ವಾಮಿ, ನನ್ನ ಕುದುರೆಗಳಿಗೆ ಒಂದು ಹಿಡಿ ಅಕ್ಕಿ ಬೆಲೆ ಕಟ್ಟಿದಿರಿ ತಾವು, ಇದರೆ ನನಗೊಂದು ಸಂದೇಹ. ಈ ಹಿಡಿ ಅಕ್ಕಿಗೆ ಏನು ಬೆಲೆಯಪ್ಪಾ ಅಂತ. ನಾಳೆ ನೀವು ರಾಜನ ಆಸ್ಥಾನದಲ್ಲಿ ಅದರ ಬೆಲೆ ತಿಳಿ ಸುವಿರಾ?' ಎಂದು ಆ ಕ್ರಯಾಧಿಕಾರಿಯನ್ನು






ಕೇಳು. ಇದಕ್ಕೆ ಅಂಗೀಕರಿಸಿದರೆ ನಾಳೆ ಆ ತನನ್ನು ರಾಜನ ಹತ್ತಿರಕ್ಕೆ ಕರೆದುಕೊಂಡು ಹೋಗು. ನಾನೂ ಅಲ್ಲಿಗೆ ಬರಲು ಪ್ರಯತ್ನಿಸುವೆನು. ಮತ್ತಿತರ ವಿಷಯ ನಾನು ನೋಡಿಕೊಳ್ಳುತ್ತೇನೆ" ಎಂದು ಸಲಹೆಕೊಟ್ಟ.

ಬೋಧಿಸತ್ವನು ಹೇಳಿದಂತೆ ಆ ವ್ಯಾಪಾರಿ ಕೂಡಲೇ ಕ್ರಯಾಧಿಕಾರಿಯ ಹತ್ತಿರ ಹೋಗಿ, ಯಾರಿಗೂ ತಿಳಿಯದಂತೆ ಆತನಿಗೆ ತಕ್ಕಷ್ಟು ಲಂಚಕೊಟ್ಟು, ಮಾರನೆಯ ದಿನ ರಾಜನ ಆಸ್ಥಾನದಲ್ಲಿ ಒಂದು ಹಿಡಿ ಅಕ್ಕಿಯ ಬೆಲೆ ತನಗೆ ತಿಳಿಸುವಂತೆ ಕೇಳಿಕೊಂಡ.

ಅದಕ್ಕೆ ಆ ಹೊಸಕ್ರಯಾಧಿಕಾರಿ 'ಓ, ಅದಕ್ಕೇನಂತೆ. ಮಾಡೋಣ. ರಾಜನಿಗೆ ಸಮಾಧಾನ ಹೇಳಿ ನಿನಗೆ ಒಳ್ಳೇ ಧರ ಕೊಡಿಸುವೆನು ಏನೂ ಚಿಂತೆಮಾಡಬೇಡ" ಎಂದು ಭರವಸೆಕೊಟ್ಟ.

ಮಾರನೆಯ ದಿನ ದರ್ಬಾರು ಜನರಿಂದ ಕಿಕ್ಕಿರಿಸಿತ್ತು. ಮಂತ್ರಿಪುಂಗವರೂ, ಉನ್ನತ ಅಧಿಕಾರಿಗಳೂ ಒಡ್ಡೋಲಗದಲಿ ಸಮಾವೇಶಗೊಂಡಿದ್ದರು.

ರಾಜನ ಆಸ್ಥಾನದ ಮೇಲೆ ಹಳೆಯ ಅಧಿಕಾರಿಯಾದ ಬೋಧಿಸತ್ವನೂ ಬಂದಿದ್ದ.

ರಾಜನ ಮುಂದೆ ಆ ಅಶ್ವ ವರ್ತಕನು "ಮಹಾ ಪ್ರಭೂ, ನನ್ನ ಐನೂರು ಕುದುರೆಗಳಿಗೆ ಒಂದು ಹಿಡಿ ಅಕ್ಕಿ ಬೆಲೆ ಕಟ್ಟಿದ್ದಾರೆ. ಆದರೆ ನನಗೊಂದು ಸಂದೇಹ ಬಂದಿದೆ. ಈ ಹಿಡಿ ಅಕ್ಕಿಗೆ ಬೆಲೆ ಎಷ್ಟು ಅಂತ. ದಯವಿಟ್ಟು ನನಗೆ ವಿವರಿಸಿ ಹೇಳಬೇಕು" ಎಂದು ವಿನಯದಿಂದ ಬಿನ್ನಯಿಸಿಕೊಂಡ.

ರಾಜನಿಗೆ ಇದುವರೆವಿಗೆ ನಡೆದ ವಿಷಯವೇನೂ ತಿಳಿಯದು. ಆದುದರಿಂದ ಆತನು "ಕ್ರಯಾಧಿಕಾರಿಯೇ, ಈ ಕುದುರೆಗಳ ಬೆಲೆ ಎಷ್ಟು ನಿರ್ಣಯಿಸಿದೆ?" ಎಂದು ಕೇಳಿದ.

"ಹಿಡಿ ಅಕ್ಕಿ ಮಹಾಪ್ರಭೂ" ಎಂದ ಕ್ರಯಾಧಿಕಾರಿ.

"ಬೇಷ್. ಸೊಗಸಾಗಿದೆ. ಐನೂರು ಕುದುರೆಗಳ ಬೆಲೆ ಒಂದು ಹಿಡಿ ಅಕ್ಕಿಯಾದರೆ, ಹಿಡಿ ಅಕ್ಕಿಯ ಬೆಲೆ ಎಷ್ಟು" ಎಂದು ಮರುಪ್ರಶ್ನೆ ಹಾಕಿದ ರಾಜ.



ಈ ಪ್ರಶ್ನೆಗೆ ಆಸ್ಥಾನದ ಕ್ರಯಾಧಿಕಾರಿ ತುಸವಾದರೂ ತಡಬಡಿಸದೆ "ಹಿಡಿ ಅಕ್ಕಿಯ ಬೆಲೆ ಮಹಾ ಅಂದರೆ ಏನಿರುತ್ತೆ ಮಹಾಪ್ರಭೂ, ಕಾಶೀರಾಜ್ಯ, ಮತ್ತು ಅದರ ನೆರೆಹೊರೆಯ ಸಾಮಂತರ ರಾಜ್ಯಗಳನ್ನು ಸಂಪಾದಿಸಿದರೆ ಎಷ್ಟು ಬೆಲೆಯೋ ಅಷ್ಟು ಬೆಲೆಯಾದೀತು." ಎಂದು ಹೇಳಿದ.

ಈ ವಿಚಿತ್ರವಾದ ಉತ್ತರ ಕೇಳಿ ಅಲ್ಲಿ ನೆರೆದಿದ್ದವರೆಲ್ಲಾ ಚಪ್ಪಾಳೆ ತಟ್ಟಿ, ಹೊಟ್ಟೆ ಹುಣ್ಣಾಗುವಂತೆ ನಗಲು ಪ್ರಾರಂಭಿಸಿದರು. ಕೋಲಾಹಲದಿಂದ ದರ್ಬಾರೆಲ್ಲಾ ಪ್ರತಿಧ್ವನಿಸಿತು.

ಅವರಲ್ಲೊಬ್ಬ ಕ್ರಯಾಧಿಕಾರಿಯನ್ನು ಕುರಿತು "ರಾಜ್ಯಗಳಿಗೆ ಬೆಲೆ ಕಟ್ಟುವುದು ಅಸಾಧ್ಯವೆಂದು ತಿಳಿದಿದ್ದೆವು. ಆದರೆ ಕಾಶೀ ರಾಜ್ಯವೆಲ್ಲಾ ಸೇರಿ ಒಂದು ಹಿಡಿ ಅಕ್ಕಿಯ ಬೆಲೆ ಎಂದು ಈಗ ತಿಳಿಯಿತು. ಆಹಾ! ಏನು ಬುದ್ಧಿವಂತಿಕೆ. ಕ್ರಯಾಧಿಕಾರಿಗಳೇ! ಈ ಆಸ್ಥಾನದಲ್ಲಿರಬೇಕಾದ ಉದ್ಯೋಗಿ ನೀನೇ ನಪ್ಪ" ಎಂದು ಗೇಲಿ ಮಾಡಿದ.

ಆಗ ಬೋಧಿಸತ್ವನು ಮುಂದೆ ಬಂದು, "ಆ ಕ್ರಯಾಧಿಕಾರಿ ಹೇಳಿದುದರಲ್ಲಿ ಸತ್ಯ ಅಡಗಿದೆ. ಅದರಲ್ಲೇನೂ ವಿಚಿತ್ರವಿಲ್ಲ. ಆತನನ್ನು ಪರಿಹಾಸ ಮಾಡಬೇಡಿ. ಆ ಹಿಡಿ ಅಕ್ಕಿ ಬೆಲೆ ಕಾಶೀರಾಜ್ಯ ಮತ್ತು ಅದರ ಸಾಮಂತ ರಾಜ್ಯಗಳು ಅಂತ ಹೇಳಿದ. ಅಂದರೆ ಈ ಐನೂರು ಕುದುರೆಗಳ ಬೆಲೆ ಕಾಶೀರಾಜ್ಯ ಮತ್ತು ಅದರ ಸಾಮಂತ ರಾಜ್ಯಗಳೆಂದಾಯಿತಷ್ಟೆ. ಆತನು ಶ್ರೇಷ್ಠ ಜಾತಿಯ ಈ ಉನ್ನತವಾದ ಕುದುರೆಗಳಿಗೆ ಕಟ್ಟಿದ ಬೆಲೆತುಂಬಾ ಸಮಂಜಸವಾಗಿದೆ ಇದರಲ್ಲೇನೂ ತಪ್ಪಿಲ್ಲ" ಎಂದು ವಿವರಿಸಿಹೇಳಿದ.

ಬೋಧಿಸತ್ವನ ವಿವರಣೆಗೆ ಎಲ್ಲರೂ ಆಶ್ಚರ್ಯಪಟ್ಟರು. ನಂತರ ತಲೆದೂಗಿದರು.

ತರುವಾಯ ನಿಜಾನಿಜ ಗಳು ಬಯಲಾದವು. ಆಗ ರಾಜ ಕಣ್ಣು ಬಿಟ್ಟ. ಪರಿಸ್ಥಿತಿಗ್ರಹಿಸಿ, ಕೂಡಲೇ ಆ ಕ್ರಯಾಧಿಕಾರಿಯನ್ನು ಕೆಲಸದಿಂದ ವಜಾಮಾಡಿ, ಮತ್ತೆ ಬೋಧಿಸತ್ವನನ್ನು ಆ ಜಾಗದಲ್ಲಿ ನೇಮಿಸಿದ.






[ ಗಿರಿಕೋಟೆಯ ಅಧಿಪತಿ ಭೀಮವರ್ಮ ತಂದೆಯನ್ನು ಕೊಂದು ಮಗನನ್ನು ಸಲಹಿದ. ಯುದ್ಧಕ್ಕೆ ಹೋಗಿ ಸೈನಿಕರಿಗಾಗಿ ವಾರ್ತೆ ಕಳುಹಿಸಲು ಇದ್ದ ಸೈನ್ಯವೆಲ್ಲಾ ಹೊರಟಿತು. ಇಷ್ಟರಲ್ಲಿ ಇಲ್ಲಿ ಗುಪ್ತ ಶತ್ರುಗಳು ತಲೆ ಎತ್ತಿ ಆತನ ಭಂಟನೊಬ್ಬನನ್ನು ಬಲಿಗೊಂಡರು. ಮುಂದೆ ಓದಿ---]

**ಭೀ**ಮವರ್ಮ ಮತ್ತು ಆತನ ಸೈನಿಕರು ಅಂದು ರಾತ್ರಿ ರಾಮನಗರದಲ್ಲಿ ಹಾಯಾಗಿ ನಿದ್ದೆ ಮಾಡಿದರು. ಬೆಳಗಿನ ಜಾವದಲ್ಲೇ ಎದ್ದು ಭೀಮವರ್ಮ ತನ್ನ ಕೆಲಸಗಳಲ್ಲಿ ನಿರತನಾದ. ಆತ ಕಟ್ಟುನಿಟ್ಟಾದ ಮನುಷ್ಯ. ಕೆಲಸಮಾಡಿಸುವ ಚಾತುರ್ಯವುಳ್ಳವ.

ಅಂದು ಬೆಳಗ್ಗೆ ವಿಜಯವರ್ಮ ಸೈನಿಕರೊಂದಿಗೆ ರಾಮನಗರವನ್ನು ಸೇರುವ ವೇಳೆಗೆ ಭೀಮವರ್ಮ ತನ್ನ ಬಿಡದಿಯ ಒಂದು ಕೊಠಡಿಯಲ್ಲಿ ಕುಳಿತಿದ್ದ. ಅಲ್ಲಿ ಹನ್ನೆರಡುವರ್ಷದಷ್ಟರ ಹುಡುಗನೊಬ್ಬನೂ ಇದ್ದ.

ವಿಜಯವರ್ಮ ಕುದುರೆಯಿಂದ ಇಳಿದು ಲಗುಬಗೆಯಿಂದ ಒಳಗೆ ಪ್ರವೇಶ ಮಾಡಿದ. ಭೀಮವರ್ಮನು ತಲೆ ಎತ್ತಿನೋಡಿ "ವಿಜಯ, ನೀನು ಹೇಗೆ ಬಂದೆ? ರಾಮಸಿಂಗ್ ಏನಾದ?" ಎಂದು ಕೇಳಿದ. ವಿಜಯವರ್ಮನು ನಮಸ್ಕಾರ ಮಾಡಿ ತಾನು ತಂದಿದ್ದ ಪತ್ರವನ್ನು ಆತನ ಕೈಗೆ ಕೊಡುತ್ತಾ "ಇದನ್ನು ಓದಿದರೆ ನಿಮಗೇ ಎಲ್ಲವೂ ತಿಳಿಯುತ್ತದೆ" ಎಂದ. ಆ ಪತ್ರ ಓದಿದಕೂಡಲೇ ಭೀಮವರ್ಮನ ಮುಖವು ಕೋಪದಿಂದ ಕೆಂಪೇರಿತು. "ಯಾವುದೋ ಪದ್ಯವನ್ನು ಕುರಿತು ಬರೆದಿದೆ ಇದರಲ್ಲಿ. ನೀನು ಓದಿರುವೆಯೇನು?" ಎಂದು ವಿಜಯವರ್ಮನನ್ನು ಪ್ರಶ್ನಿಸಿದ. ವಿಜಯ ತಲೆಯಾಡಿಸಿದ. "ಅದರಲ್ಲಿ ನಿಮ್ಮ ತಂದೆಯನ್ನು ಸೋಮಶರ್ಮ ಕೊಂದಂತೆ ಏನೋ ಬರೆದಿದೆ" ಎಂದ




ಭೀಮವರ್ಮ. "ನನಗೇನೂ ತಿಳಿಯದೆಂದು ಹೇಳಿದರು ಸೋಮಶರ್ಮರು" ಎಂದು ಉತ್ತರಕೊಟ್ಟ ವಿಜಯ.

"ಹಾಗೋ. ಸರಿ. ನಾನು ನಿಧಾನವಾಗಿ ನಿನಗೆ ಈ ವಿಷಯಗಳನ್ನೆಲ್ಲಾ ಹೇಳುವೆನು. ಆಗ ಜನ ಚಂಡಿದಾಸನು ಕೊಂದಿರಬಹುದೆಂದು ತಿಳಿದಿದ್ದಿತು. ಸಮಯ ಕುದುರಲಿಲ್ಲವಾಗಿ ಆಗ ಏನುಮಾಡಲೂ ಸಾಧ್ಯವಾಗಲಿಲ್ಲ. ನಾನೊಂದು ಪತ್ರ ಬರೆದುಕೊಡುತ್ತೇನೆ. ತಂಗಳು ತಿಂದಮೇಲೆ ನೀನು ಅದನ್ನು ತೆಗೆದುಕೊಂಡು ಹಿಂದಿರುಗು" ಎಂದ ಭೀಮವರ್ಮ.

ಆಗ ವಿಜಯವರ್ಮನು: "ಪತ್ರವನ್ನು ಬೇರೆ ಯಾರ ಕೈಯಲ್ಲಾದರೂ ಕಳುಹಿಸಿ. ನನ್ನನ್ನೂ ಸಹ ನಿಮ್ಮೊಂದಿಗೆ ಕರೆದೊಯ್ಯಿರಿ" ಎಂದ. ಆದರೆ ಇದಕ್ಕೆ ಭೀಮವರ್ಮ ಒಪ್ಪಲಿಲ್ಲ.



ಆತನು ಪತ್ರವನ್ನು ಬರೆಯುತ್ತಿರುವಾಗ ವಿಜಯವರ್ಮ ತಂಗಳು ತಿನ್ನುತ್ತಿದ್ದ. ಇಷ್ಟರಲ್ಲಿ ಯಾರೋ ಆತನ ಕೈಯನ್ನು ಸೋಕಿದಂತಾಯಿತು. ಒಂದು ಎಳೆ ಕಂಠ ಆತನ ಕಿವಿಯಲ್ಲಿ ಗುಸುಗುಟ್ಟಿತು. "ಪೂರ್ವ ದಿಕ್ಕಿನಲ್ಲಿರುವ ಬೆಟ್ಟಕ್ಕೆ ದಾರಿ ಹೇಳುವೆಯಾ ಎಳೆಯಾ?" ಎಂದು. "ಗಿರಿಕೋಟೆ ದಾರಿಯಲ್ಲಿ ಹೋಗು. ಅಲ್ಲೊಂದು ನದಿ ಕಾಣಿಸುತ್ತದೆ. ಯಾರನ್ನಾದರೂ ಅಲ್ಲಿ ವಿಚಾರಿಸಿದರೆ ನಿನಗೆ ದಾರಿ ತಿಳಿಯುತ್ತದೆ" ಎಂದು ವಿಜಯವರ್ಮನೂ ಸಹ ಮೆಲ್ಲನೆ ಸಮಾಧಾನಕೊಟ್ಟ. ಇದೆಲ್ಲಾ ಕ್ಷಣಮಾತ್ರದಲ್ಲಿ ನಡೆದುಹೋಯಿತು. ವಿಜಯವರ್ಮ ಮತ್ತೆ ತಲೆ ಎತ್ತಿ ನೋಡಲು, ಅಲ್ಲಿ ಕುಳಿತಿದ್ದ ಆ ಹುಡುಗ ಕಾಣಿಸಲಿಲ್ಲ.

"ನೋಡಿದೆಯಾ, ಆ ಹುಡುಗ ನನ್ನನ್ನು 'ಎಳೆಯಾ' ಎಂದು ಸಂಭೋದಿಸಿದ. ಅವನಿಗೆ ಕೊಡ್ತೇನೆ ಸರಿಯಾದ ಕೆಲಸ" ಎಂದು ಅಂದುಕೊಂಡ ವಿಜಯವರ್ಮ.

ಸ್ವಲ್ಪ ಹೊತ್ತಿಗೆಲ್ಲಾ ಭೀಮವರ್ಮ ಪತ್ರ ಬರೆದುಕೊಟ್ಟ. ಅದನ್ನು ತೆಗೆದುಕೊಂಡು ವಿಜಯವರ್ಮ ಗಿರಿಕೋಟೆಯ ಕಡೆ ಹೊರಟ. ಆತ ಹಾಗೆ ಹೋದನೋ ಇಲ್ಲವೋ, ಕೊಸಲ್ಪೂರು ಸಾಮಂತರಲ್ಲಿ ಒಬ್ಬನಾದ ಚಂದ್ರ ದುರ್ಗಾಧಿಪತಿಯ ಹತ್ತಿರದಿಂದ ಒಬ್ಬ ದೂತ ಬಂದು ಅಂದು ಪ್ರಾತಃಕಾಲ ಯುದ್ಧ ಷುರುವಾಯಿತೆಂದೂ, ಭೀಮವರ್ಮನ ಸಹಾಯ ಅತ್ಯವಸರವೆಂದೂ ಹೇಳಿದ.

ಆದರೆ ಭೀಮವರ್ಮ ಆತನು ಹೇಳಿದ್ದನ್ನು ಕೇಳುವ ಪರಿಸ್ಥಿತಿಯಲ್ಲಿರಲಿಲ್ಲ. "ಕರುಣ ಎಲ್ಲಿಗೆ ಹೋದಳು? ಎಲ್ಲಿ ಆ ಹುಡುಗಿ?" ಎಂದು ಆರ್ಭಟಿಸುತ್ತಿದ್ದಾನೆ. ಇದನ್ನು ಕೇಳಿ ಒಬ್ಬನು "ಯಾವ ಹುಡುಗಿ ಮಹಾಸ್ವಾಮಿ? ಇಲ್ಲಿ ಯಾವ ಹುಡುಗಿಯೂ ಇಲ್ಲವಲ್ಲಾ?" ಎಂದ. "ಎಲೋ ಮಂಕೂ, ಈವರೆವಿಗೆ ನನ್ನೊಂದಿಗೆ ಒಬ್ಬ ಹುಡುಗನಿರಲಿಲ್ಲವೇ, ಅವನೇ ಕರುಣ" ಎಂದ ಭೀಮವರ್ಮ. "ನೀವು ಕರುಣಾಕರನೆಂದು ಕರೆಯುತ್ತಿದ್ದವನೆ? ಆ ವ್ಯಕ್ತಿ ಒಂದರ್ಧಗಂಟೆ ಹಿಂದೆ ಕುದುರೆ ಹತ್ತಿ ಹೋದರು" ಎಂದ ನಾರಾಯಣ ಎಂಬಾತ.




"ಹಾಗಾದರೆ ಏಕೆ ಬೆಪ್ಪರಂತೆ ನೋಡುವಿರಿ? ನಾರಾಯಣ. ನೀನು ಕೆಲ ಸೈನಿಕರೊಂದಿಗೆ ಆ ಹುಡುಗಿಯನ್ನು ಹಿಂಬಾಲಿಸಿ ಹೋಗಿ ಹಿಡಿಯಬೇಕು. ಕರೆದೊಯ್ದು ಗಿರಿ ಕೋಟೆಯಲ್ಲಿ ಇಡು. ಇಲ್ಲದಿದ್ದರೆ ನಿನಗೆ ಗೊತ್ತಿದೆತಾನೇ?" ಎಂದು ಗರ್ಜಿಸಿದ. ತಕ್ಷಣ ನಾರಾಯಣ ಆರುಜನ ಸೈನಿಕರನ್ನು ಕರೆದುಕೊಂಡು ಕರುಣಾಕರನ ಬೆನ್ನಟ್ಟಿದ.

ಆ ಮೊದಲೇ ಹೊರಟ ವಿಜಯವರ್ಮ ಗಿರಿ ಕೋಟೆಯ ಸಮೀಪದಲ್ಲಿದ್ದ ಕೆಸರಿನ ಪ್ರದೇಶವನ್ನು ಸಮೀಪಿಸಲು ಅಲ್ಲಿ ಕೆಸರಿನಲ್ಲಿ ಸಿಕ್ಕಿಕೊಂಡಿದ್ದ ಒಂದು ಕುದುರೆ ಕಾಣಿಸಿತು. ಸವಾರನೂ ಸಹ ಅಲ್ಲೇ ಎಲ್ಲೋ ಹತ್ತಿರದಲ್ಲಿರಬಹುದೆಂದುಕೊಂಡ. ಅಷ್ಟರಲ್ಲಿ ಆತನಿಗೊಬ್ಬ ಹುಡುಗ ಕಾಣಿಸಿದ. ತಾನು ಭೀಮವರ್ಮನ ಗುಡಾರದಲ್ಲಿದ್ದಾಗ ಪೂರ್ವ ದಿಕ್ಕಿನ ಬೆಟ್ಟಕ್ಕೆ ದಾರಿಕೇಳಿದ ಹುಡುಗನೇ ಆತನೆಂದು ಊಹಿಸಿದ. ಕೆಸರಿನಲ್ಲಿ ಬಿದ್ದು ಸಾಯುತ್ತಿರುವ ಕುದುರೆ ಅವನದೇ ಎಂದು ಗ್ರಹಿಸಿದ. ತನ್ನೆಡೆಗೆ ಕರೆದು, ಆತನನ್ನು ಸಹ ತನ್ನ ಕುದುರೆಯ ಮೇಲೇರಿಸಿಕೊಂಡ ವಿಜಯವರ್ಮ.

ಕೊಂಚದೂರ ಹೋದಮೇಲೆ "ನಿನ್ನ ಹೆಸರೇನಪ್ಪಾ?" ಎಂದು ಕೇಳಿದ ವಿಜಯ. ಆ ಹುಡುಗ "ಕರುಣಾಕರ" ಎಂದು ಹೇಳಿದ. "ಭೀಮವರ್ಮ ನಿನಗೇನಾಗಬೇಕು?" "ನನಗೇನೂ ಸಂಬಂಧವಿಲ್ಲ. ತನ್ನ ಸ್ವಾರ್ಥಕ್ಕಾಗಿ ನನ್ನನ್ನು ಬಂಧಿಸಬೇಕೆಂದು ಹವಣಿಸಿದ. ಆತನ ಕೈಗೆ ಸಿಕ್ಕಿದರೆ ನನಗೆ ಮುಪ್ಪು ಖಂಡಿತ. ಅಲ್ಲಿಂದ ತಪ್ಪಿಸಿಕೊಂಡು ಹೋಗುತ್ತಿರುವೆನು, ಎಳೆಯಾ!" ಎಂದ ಆ ಹುಡುಗ.



"ಎಲ ಎಲಾ, ಮತ್ತೆ ನನ್ನನ್ನು 'ಎಳೆಯಾ' ಎಂದು ಕೂಗುವೆಯಾ? ನಿನಗೆ ಬುದ್ಧಿ ಕೆಟ್ಟಿರುವುದೇನು? ನಾನು ನಿನಗಿಂತಲೂ ಕಿರಿಯನೇ? ಹಾಂ. ನೀನು ಭೀಮವರ್ಮನ ಕೈಯಿಂದ ತಪ್ಪಿಕೊಂಡು ಹೋಗುತ್ತಿರುವೆ. ನಾನು ನಿನಗೆ ಸಹಾಯಮಾಡಿದೆನೆಂದು ಆತನಿಗೆ ತಿಳಿಯಿತೋ ನನಗೂ ಸಹ ಮುಪ್ಪು ಖಂಡಿತ. ನನಗೇಕೆ ಇಲ್ಲದಗೊಡವೆ?" ಎಂದ ವಿಜಯವರ್ಮ. ಆ ಹುಡುಗ ತನಗೆ ಸಹಾಯ ಮಾಡುವಂತೆ ತುಂಬಾ ಪ್ರಾರ್ಥಿಸಿಕೊಂಡ.

ವಿಜಯನಿಗೆ ತುಂಬಾ ಅನುಕಂಪವುಂಟಾಯಿತು. "ನಿನಗೇನೂ ಭಯವಿಲ್ಲ. ನಿನ್ನ ಪ್ರಾಣಕ್ಕೆ ನನ್ನಪ್ರಾಣ ಕೊಟ್ಟೇನು" ಎಂದು ಅಭಯಕೊಟ್ಟ. ಆತನು ಹಾಗೆ ನುಡಿದನೋ ಇಲ್ಲವೋ ಹಿಂದಿನಿಂದ ಯಾರೋ ಬೊಬ್ಬೆಯಿಡುತ್ತಿರುವಂತೆ ಕೇಳಿಸಿತು. ಅವರಿಬ್ಬರೂ ಆಗಲೇ ನದಿಯ ದಡವನ್ನು ಸಮೀಪಿಸಿದ್ದರು.

ವಿಜಯವರ್ಮನು ಕೂಗಿದಾಕ್ಷಣ ಅಂಬಿಗನು ಬಂದ. ಕರುಣಾಕರನನ್ನು ನೋಡಿ "ಈತನಾರು?" ಎಂದು ಕೇಳಿದ. "ನಮ್ಮ ಬಳಗದವರು" ಎಂದು ವಿಜಯ ಹೇಳಲು, ಕರುಣಾಕರನನ್ನು ನಿಟ್ಟಿಸಿ ನೋಡಿ ನಗಲು ಪ್ರಾರಂಭಿಸಿದ. ವಿಜಯವರ್ಮನು ಕೋಪಿಸಿಕೊಳ್ಳಲು, ನಗು ತಡೆದುಕೊಂಡ.

ಆದರೆ ಅಂಬಿಗನು ವಿಜಯವರ್ಮನನ್ನು ಮಾಮೂಲು ಸ್ಥಳದಲ್ಲಿ ಇಳಿಸಲಿಲ್ಲ. ಇದು ವಿಜಯವರ್ಮನಿಗೆ ತುಂಬಾ ಸೋಜಿಗವಾಗಿ ಕಾಣಿಸಿತು. ಕಾರಣ ಕೇಳಲು ಅಂಬಿಗ ಸಂಜ್ಞೆ ಮಾಡಿದ. ಎದುರಾಗಿದ್ದ ಒಂದು ಮರದಮೇಲೆ ಬಾಣವನ್ನು ಹೆದೆಗೇರಿಸಿ ಗುರಿನೋಡುತ್ತಿರುವನೊಬ್ಬಾತ "ಯಾರದು?" ಎಂದು ಕೂಗಿದ.

"ಯಾರಾದರೇನು?" ಇದು ವಿಜಯನ ಸವಾಲು. "ಈತನು ವಿಜಯವರ್ಮ, ಮತ್ತೆ ಯಾರೂ ಅಲ್ಲ" ಎಂದು ಅಂಬಿಗನು ಹೇಳುತ್ತಿರುವಷ್ಟರಲ್ಲಿ ಒಂದು ಬಾಣರೊಯ್ಯನೆ ಬಂದು ವಿಜಯವರ್ಮನ ಕುದುರೆಯ ಹೃದಯಕ್ಕೆ ನಾಟಿತು. ಈ ಗಲಭೆಯಲ್ಲಿ ಕರುಣಾಕರ ಮೊದಲೇ ನೀರಿನಲ್ಲಿ ಹಾರಿ ದಡವನ್ನು ಸೇರಿಬಿಟ್ಟಿದ್ದ. ಆದರೆ ವಿಜಯವರ್ಮನು ಹಾರುವಷ್ಟರಲ್ಲಿ ಕುದುರೆ ಕುಸಿದು ಬೀಳುವುದೂ, ಹಡಗು ಮುಗುಚಿಕೊಳ್ಳುವುದೂ ಸಂಭವಿಸಿತು.

ಹಾಗೂ ಹೀಗೂ ವಿಜಯವರ್ಮ ದಡ ಸೇರುವವರೆಗೆ ಕರುಣಾಕರನು ಅಲ್ಲಿಂದ ಕದಲಲಿಲ್ಲ. ಅದೊಂದು ದಟ್ಟವಾದ ಅಡವಿ. ಒಂದು ಕ್ಷಣವಾದರೂ ಅಲ್ಲಿ ನಿಲ್ಲದೆ ಇಬ್ಬರೂ ಓಡಲು ಪ್ರಾರಂಭಿಸಿದರು. ಆದರೆ ತುಸ ಹೊತ್ತಿಗೆಲ್ಲಾ ಕರುಣಾಕರ ಆಯಾಸಗೊಂಡು ಕುಂಟುತ್ತಾ ನಡೆಯಲು ಮೊದಲು ಮಾಡಿದ. ಆಗ ವಿಜಯವರ್ಮನು ಕರುಣಾಕರನಿಗೆ ಆಸರೆ ಕೊಟ್ಟು ನಡೆಸಿದ. ಸ್ವಲ್ಪದೂರ ಆ ರೀತಿ ಸಾಗಲು ವಿಜಯವರ್ಮನು ತಟಕ್ಕನೆ ನಿಂತು ಅಂದ : "ನಿನ್ನನ್ನು ನೋಡಿ ಅಂಬಿಗನು ಬಿದ್ದು ಬಿದ್ದು ನಕ್ಕನೇಕೋ ನನಗೀಗ ಅರ್ಥವಾಗುತ್ತಿದೆ. ನೀನು ಹೀಗೆ ಸೊರಗಿಕೊಂಡು, ಬಲಹೀನನಾಗಿ, ಸುಕುಮಾರನಾಗಿರುವುದನ್ನು ನೋಡಿ ಹುಡುಗಿ ಎಂದು ತಿಳಿದಿರಬೇಕು" "ಇಲ್ಲ ಇಲ್ಲ" ಎಂದ ಕರುಣಾಕರ. ಲಜ್ಜೆ ಅಡಗಿತ್ತು ಆ ಮಾತಿನಲ್ಲಿ. "ಹಾಗೆನ್ನಬೇಡ. ನಿನ್ನನ್ನುಕಂಡು ಯಾರಾದರೂ ಹುಡುಗಿ ಎಂತಲೇ ತಿಳಿಯುವರು! ಅವನದೇನೂ ತಪ್ಪಿಲ್ಲ" ಎಂದು ನಕ್ಕ ವಿಜಯವರ್ಮ.

ಹಾಗೇ ಮತ್ತಷ್ಟು ದೂರ ಹೋಗಲು ಒಂದು ಜಿಂಕೆ ಅವರಮುಂದೆ ರಿವ್ವನೆ ನುಗ್ಗಿ ಓಡಿಹೋಯಿತು. ಇದುವರೆವಿಗೂ ವಿಜಯ ಮತ್ತು ಕರುಣಾಕರರು ನಿಧಾನವಾಗಿ ನಡೆಯುತ್ತಿದ್ದರು. ಆದರೆ ಈಗ ವಿಜಯವರ್ಮನಿಗೆನೋ ಅನುಮಾನವುಂಟಾಯಿತು. ಎತ್ತರವಾದ ಮರದಮೇಲೇರಿ ನೋಡಲು ನದಿಯ




ಇತ್ತ ಕಡೆದಡದಲ್ಲಿ ಏನೋ ಕದಲುತ್ತಿರುವಂತೆ ಕಾಣಿಸಿತು. ಅನುಮಾನ ದೃಢವಾಯಿತು. ಇಬ್ಬರೂ ಮತ್ತೆ ಮುಂದೆಸಾಗಿದರು. ಗಿರಿಕೋಟೆ ಅರಣ್ಯದ ಆಚೆಕೊನೆಯನ್ನು ಮುಟ್ಟುವಷ್ಟರಲ್ಲಿ ಮತ್ತೆ ಏನೋ ಸಪ್ಪಳವಾಯಿತು. ಕೂಡಲೇ ವಿಜಯವರ್ಮ ಒಂದು ಮರದ ಹಿಂದೆ ಅವಿತುಕೊಂಡ. ಕರುಣಾಕರನಿಗೆ ಇದೆಲ್ಲಾ ಅರ್ಥವಾಗಲಿಲ್ಲ.

"ಹುಷ್" ಎಂದು ವಿಜಯವರ್ಮ ಬೆರಳಿಂದ ಸಂಜ್ಞೆಮಾಡಿದ. ಅವರಿಗೆ ನೂರುಗಜ ದೂರದಲ್ಲಿ ಒಂದು ಮರದಮೇಲೆ ಒಬ್ಬ ಧನುರ್ಧಾರಿಯಾಗಿ ನಾಲ್ಕುದಿಕ್ಕುಗಳನ್ನು ಪರಿಶೀಲಿಸಿ ನೋಡುತ್ತಿದ್ದಾನೆ. "ಎಡೆಗಡೆಯಿಂದ ತಪ್ಪಿಸಿಕೊಂಡು ಹೋಗೋಣ ನಡೆ" ಎಂದ ವಿಜಯವರ್ಮ. ಅವರು ಹಾಗೇ ತುಸದೂರ




ಹೋದರು. ಆ ಪ್ರದೇಶವೆಲ್ಲಾ ವಿಜಯವರ್ಮ ನಿಗೆ ಹೊಸದಾಗಿತೋರಿತು. ಆದುದರಿಂದ ಅವರು ಎಚ್ಚರಿಕೆಯಿಂದ ನಡೆಯುತ್ತಿದ್ದರು.

ಅಷ್ಟರಲ್ಲ ಯಾರೋ ಹಾಡುವುದು ಕೇಳಿ ಸಿತು. ಇಬ್ಬರೂ ನಿಂತಲ್ಲೇ ನಿಂತುಬಿಟ್ಟರು. ಶಬ್ದಬಂದಕಡೆ ನೋಡಲು ಅವರಿಗೊಂದು ಕಂದಕ ಕಾಣಿಸಿತು. ಪಕ್ಕದಲ್ಲೊಂದು ಪಾಳು ಬಿದ್ದ ಕಟ್ಟಡವಿತ್ತು. ಅಲ್ಲೊಂದು ಒಲೆ ಉರಿ ಯುತ್ತಿದೆ. ಕಳ್ಳರವೇಷದಲ್ಲಿದ್ದವ ನೊಬ್ಬನು ಒಲೆಮುಂದೆ ಕುಳಿತು ಏನೋ ಹಾಡುತ್ತಿ ದ್ದಾನೆ. ಇಬ್ಬರು ಮೂವರು ಅಲ್ಲೇ ಹತ್ತಿರ ದಲ್ಲಿ ಮಲಗಿಕೊಂಡಿದ್ದರು. ಅಡಿಗೆ ಸಿದ್ಧವಾದಂ ತಿದೆ. ಅಡಿಗೆಮಾಡುತ್ತಿದ್ದವನು ಸಿಳ್ಳುಹಾಕಿದ ಕೂಡಲೇ ಸುತ್ತಮುತ್ತಲಿಂದ ಮೂವತ್ತು ನಲ ವತ್ತು ಜನ ತಟ್ಟೆಗಳೊಂದಿಗೆ ಬಂದರು.



ಅವರೆಲ್ಲರೂ ಕುಳಿತುಕೊಂಡ ತರುವಾಯ ಬಹುಶೀವಿಯಿಂದ ಒಬ್ಬಾತ ಬಂದು ಕುಳಿತು ಕೊಂಡ. ಆತನ ವೈಖರಿ ನೋಡಿದರೆ ಆತನೇ ಇವರ ನಾಯಕನಂತೆ ತೋರುತ್ತಿತ್ತು. "ಗೆಳೆ ಯರೇ, ಬೇಗ ಆಗಲಿ. ಬೇಗಬೇಗ ಬಡಿಸು ಧನಪಾಲ್. ಚಿಕ್ಕದೊಂದು ಕೆಲಸ ಮಾಡುವು ದಿದೆ" ಎಂದ ಆ ವ್ಯಕ್ತಿ. ಅವರ ಊಟ ಮುಗಿಯುವಷ್ಟರಲ್ಲಿ ಒಂದು ಬಾಣ ರಿವ್ವನೆ ಬಂದು ಹಾಳುಬಿದ್ದ ಕಟ್ಟಡದ ಗೋಡೆಗೆ ತಗುಲಿ ಚೂರುಚೂರಾಯಿತು. ಇದು ಮೊದಲೇ ವ್ಯವಸ್ಥೆ ಮಾಡಿಕೊಂಡಿದ್ದ ಸಂಜ್ಞೆ ಯಾಗಿರಬೇಕು. ಏಕೆಂದರೆ, ಇದನ್ನು ನೋಡಿದಕೂಡಲೇ ಅವರೆಲ್ಲಾ ಕುಳಿತಲ್ಲೇ ಕೈ ತೊಳೆದುಕೊಂಡು ಎದ್ದರು. ನಾಯಕನು ಎಲ್ಲರಿಗಿಂತ ಮೊದಲೇ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು "ಸಂಗಡಿಗರೇ, ಭೀಮ ವರ್ಮನೋ, ಇಲ್ಲ ಅವನ ಅನುಚರರಲ್ಲಿ ಕೆಲ ವರೋ ಸಿಕ್ಕಿಬಿದ್ದಿದ್ದಾರೆ. ಜ್ಞಾಪಕವಿಟ್ಟು ಕೊಳ್ಳಿ. ದಿಕ್ಕಿಲ್ಲದೆ ಸತ್ತ ಅಭಯವರ್ಮ ನೊಬ್ಬನದೇ ಅಲ್ಲ, ಇನ್ನೂ ಎಷ್ಟೋ ಜನರ ಹಗೆ ಸಾಧಿಸಬೇಕು ನಾವು" ಹೀಗೆ ಹೇಳಲು ಎಲ್ಲಿದ್ದವರೆಲ್ಲ ಕ್ಷಣಮಾತ್ರದಲ್ಲಿ ಮತ್ತೆ ಅಡವಿ ಯಲ್ಲಿ ಮಾಯವಾದರು. ವಿಜಯವರ್ಮ ಮತ್ತು ಕರುಣಾಕರರಿಗೆ ಸ್ವಲ್ಪ ಉಸಿರಾಡಲು ಅವಕಾಶವಾಯಿತು. "ನಾವು ಹೋಗೋ ಣವೇ?" ಎಂದ ಕರುಣಾಕರ.

"ಒಳ್ಳೆ ಅಸಾಮಿಯಪ್ಪ ನೀನು" ಎಂದ ವಿಜಯ.





"ಭೀಮವರ್ಮನ ಸೈನಿಕರನ್ನು ನೀನು ರಕ್ಷಿಸುವೆಯೇನು? ಕಳ್ಳರ ನಾಯಕನು ನುಡಿದ ಮಾತುಗಳು ನೀನು ಕೇಳಲಿಲ್ಲವೇ? ಎಂದ ಕರುಣಾಕರ.

"ಕಳ್ಳರ ಮಾತು ನಂಬುವುದೇ?" ಎಂದು ವಿಜಯವರ್ಮ ಬೆನ್ನು ತಿರುಗಿಸಿದ. ಕರುಣಾಕರ ಆತನನ್ನು ಹಿಂಬಾಲಿಸಿದ.

ಅತಿದೂರದಲ್ಲಿ ವಿಜಯವರ್ಮನಿಗೆ ನಾರಾಯಣ ಮತ್ತು ಆತನ ಅನುಯಾಯಿಗಳು ಬರುತ್ತಿರುವುದು ಕಾಣಿಸಿತು. ಅವರು ಬಯಲು ಪ್ರದೇಶವನ್ನು ಸೇರುವವೇಳೆಗೆ ನಾಲ್ಕು ಕಡೆಯಿಂದ ಬಾಣಗಳ ಸುರಿಮಳೆ ಪ್ರಾರಂಭವಾಯಿತು. ಅವರು ತಲ್ಲಣಿಸಿಹೋದರು.

ಶತ್ರುಗಳು ಮಾತ್ರ ಕಾಣಿಸರು. ಬಾಣಗಳು ಯಮನೋಪಾದಿಯಲ್ಲಿಬಂದು ಪ್ರಾಣಗಳನ್ನು ಬಲಿಗೊಳ್ಳುತ್ತಿವೆ. ನಿಮಿಷ ಮಾತ್ರದಲ್ಲಿ ಅವರೆಲ್ಲರ ಚರಿತ್ರೆ ಮುಗಿಯಿತು. ನಾರಾಯಣನೊಬ್ಬ ಉಳಿದಿದ್ದ. ಒಂದು ಸಾರಿ ನಾಲ್ಕು ದಿಕ್ಕಿಗೂ ನೋಡಿ ಆತನು ಓಡಲು ನಿಶ್ಚಯಿಸಿದ.

ಆತನ ಚರ್ಯೆಗಳನ್ನು ಗಮನಿಸುತ್ತಿದ್ದ ಶತ್ರುಗಳು ಹೊಟ್ಟೆ ಹುಣ್ಣಾಗುವಂತೆ ನಕ್ಕರು. ನಾರಾಯಣನಿಗೆ ಕೋಪ ಬಂತು. ಕಣ್ಣು ಮುಚ್ಚಿಕೊಂಡು ಒಂದು ಬಾಣವನ್ನು ಅರಣ್ಯದ ಕಡೆ ಬಿಟ್ಟ.

ಅದೃಷ್ಟವಶಾತ್ ಅದು ಯಾರಿಗೋ ತಗುಲಿರಬೇಕು. ಕೂಡಲೇ ಒಂದು ಸಂಕಟಕರವಾದ ಧ್ವನಿ ಕೇಳಿಸಿತು.



ಮತ್ತೆ ಬಾಣದ ಸುರಿಮಳೆ. ನಾರಾಯಣ ಪ್ರಾಣ ಉಳಿಸಿಕೊಳ್ಳಲು ಹವಣಿಸಿದ. ವಿಜಯ ಮತ್ತು ಕರುಣಾಕರರು ಅವನಪಾಡು ಏನಾಗುವುದೋ ಎಂದು ನೋಡುತ್ತಿದ್ದರು.

ಇಷ್ಟರಲ್ಲಿ ಒಂದು ಬಾಣ ಬಂದು ನಾರಾಯಣನ ಎದೆಗೆ ನಾಟಿತು. ಆತ ಕೂಡಲೇ ಕೆಳಗೆಬಿದ್ದ. ವಿಜಯವರ್ಮ ಆತನ ಹತ್ತಿರಕ್ಕೆ ಓಡಿದ. "ಅಭಯವರ್ಮನ ಮಗನನ್ನು ಕೊಲ್ಲಕೂಡದೆಂದು ಚಂಡಿದಾಸನ ಆಜ್ಞೆ" ಎಂದು ಯಾರೋ ಹೇಳಿದ ಮಾತು, ಆಗ ವಿಜಯವರ್ಮನ ಪ್ರಾಣವನ್ನು ಉಳಿಸಿತು. ಆತನೂ ಕರುಣಾಕರನೂ ಅಲ್ಲಿಂದ ಓಡಿದರು. ಸದ್ದು ನಿಲ್ಲುವವರೆಗೂ ಎಲ್ಲೂ ನಿಲ್ಲಲಿಲ್ಲ.

ಮತ್ತೆ ತಮ್ಮ ದಾರಿ ಹಿಡಿಯೋಣ ವೆಂದಿರುವಷ್ಟರಲ್ಲಿ ಚಲ್ಲಾಪಿಲ್ಲಿಯಾಗಿ ಓಡುತ್ತಿರುವ

ಗುಂಪೊಂದು ಕಾಣಿಸಿತು. ಇದನ್ನು ನೋಡಿ ವಿಜಯವರ್ಮ ಕೊಸಲ್ಪೂರು ಯುದ್ಧದಲ್ಲಿ ಸೋತಂತೆ ಗ್ರಹಿಸಿದ. ಭೀಮವರ್ಮನ ಪಾಡೇನಾಯಿತೋ?

ಅವರಿಗೆ ಎಲ್ಲಿಂದಲೋ ದುಡಿಯ ಶಬ್ದ ಕೇಳಿಸಿತು. ಆ ಶಬ್ದ ತಮ್ಮನ್ನು ಸಮೀಪಿಸುತ್ತಿರುವಂತೆ ತೋರಿತು.

ಅಲ್ಲಿಗೊಬ್ಬ ಬುಡಬುಡಕಿಯವನು ಬಂದ. ಆತನನ್ನು ಕಂಡಾಕ್ಷಣ ಕರುಣಾಕರ ಮೂರ್ಛೆಹೋದ. ವಿಜಯವರ್ಮ ಚೀರಿಬಿದ್ದ.

ಬಂದಾತನು ಮತ್ತೆಯಾರೂ ಅಲ್ಲ, ಭೀಮವರ್ಮ! "ಏನು ವಿಜಯ, ಒಳ್ಳೆ ಸ್ನೇಹಿತನನ್ನು ಸಂಪಾದಿಸಿದೆಯಲ್ಲಾ ಆತನ ಹೆಸರಾದರೂ ನಿನಗೆ ಗೊತ್ತೆ?" ಎಂದು ಕೇಳಿದ ಬುಡಬುಡಿಕೆಯವನ ವೇಷದಲ್ಲಿದ್ದ ಭೀಮವರ್ಮ.

"ಕರುಣಾಕರ ಅಂತಲ್ಲವೇ. ಅದೇನು ನೀವು ಈ ವೇಷದಲ್ಲಿರುವಿರಿ?" ಎಂದು ಕೇಳಿದ ವಿಜಯವರ್ಮ.

ಇದನ್ನು ಕೇಳಿ ಭೀಮವರ್ಮನಿಗೆ ಕೋಪ ಬಂತು. "ಏನು ಮಾಡುವುದು? ನಮ್ಮ ಪಕ್ಷ ಸೋತುಹೋಯಿತು. ನಮ್ಮವರೆಲ್ಲಾ ಏನಾದರು? ಈತನೆಲ್ಲಿ ಸಿಕ್ಕಿದ ನಿನಗೆ?"

"ದಾರಿಯಲ್ಲಿ ಸಿಕ್ಕಿದ. ನಾರಾಯಣ ಮತ್ತು ಆತನ..."

ಎಂದು ಹೇಳುವಷ್ಟರಲ್ಲಿ ಭೀಮವರ್ಮ ಕಾತುರದಿಂದ "ಎಲ್ಲಿ ಅವರು" ಎಂದು ಕೇಳಿದ.

ವಿಜಯವವರ್ಮ ನಡೆದ ವಿಷಯವನ್ನೆಲ್ಲಾ ಹೇಳಿದ. ಭೀಮವರ್ಮ ಉರಿದುಬಿದ್ದ. "ಹಾಗಾದರೆ ನಾನು ಗಿರಿಕೋಟೆಗೆ ಹೋಗುವೆನು. ನೀನು ನಿನ್ನ ಸ್ನೇಹಿತನೊಂದಿಗೆ ಅಲ್ಲಿಗೆ ಬಾ" ಎಂದು ವಿಜಯವರ್ಮನಿಂದ ಭಾಷೆ ತೆಗೆದುಕೊಂಡು ಹೊರಟ.

ವಾಗ್ದಾನದ ಪ್ರಕಾರ ಕರುಣಾಕರನೊಂದಿಗೆ ವಿಜಯವರ್ಮ ಗಿರಿಕೋಟೆಗೆ ಹೋಗಬೇಕಾಯಿತು. ಅಲ್ಲಿ ಅವರಿಗಾಗಿ ಭೀಮವರ್ಮ ಕಾದಿದ್ದಾನೆ. [ಇನ್ನೂ ಇದೆ]






# ಪವಿತ್ರವಾದ ಸೇವೆ

ಬಹಳಕಾಲದ ಹಿಂದೆ ಒಬ್ಬ ಭಕ್ತನಿದ್ದ. ಆತನಿಗೆ ತೀರ್ಥಯಾತ್ರೆಮಾಡುವ ಅಭಿಲಾಷೆ ಬಹಳವಾಗಿತ್ತು. ಆದರೆ ಮನೆಬಿಟ್ಟು ಹೊರಡಲು ಸಾಧ್ಯವಿರಲಿಲ್ಲ. ವೃದ್ಧರಾದ ತಂದೆ ತಾಯಿಗಳಿಗೆ ಆತನೇ ಆಧಾರ. ಆದುದರಿಂದ ಕ್ಷಣಕಾಲವಾದರೂ ಅವರನ್ನು ಬಿಟ್ಟು ಹೊರಡಲು ಸಾಧ್ಯವಾಗುವಂತೆ ಕಾಣಿಸಲಿಲ್ಲ.

ಯಾವ ಯೋಚನೆಯೂ ತೋರಲಿಲ್ಲ. ಈ ಸಂದಿಗ್ಧ ಪರಿಸ್ಥಿತಿ ಆ ಭಕ್ತನ ಮನಸ್ಸಿಗೆ ತುಂಬಾ ನೋವನ್ನುಂಟುಮಾಡುತಿತ್ತು. 'ಈ ಮುದುಕರನ್ನು ಬಿಟ್ಟು ನಾನು ಯಾತ್ರೆ ಮಾಡುವಹಾಗೇ ಇದೆ; ನನಗೆ ಮೋಕ್ಷಪ್ರಾಪ್ತವಾಗುವಹಾಗೇ ಇದೆ' ಎಂದು ನಿರಾಶೆಯಿಂದ ವ್ಯಾಕುಲಚಿತ್ತನಾದನು.

ತೀರ್ಥಯಾತ್ರೆಗಳಮೇಲೆ ದೀಕ್ಷೆಹೊಂದಿದ ಆ ಭಕ್ತನಿಗೆ ಜೀವನದಲ್ಲಿ ವಿರಕ್ತಿಯುಂಟಾಯಿತು. ಒಂದೊಂದುಸಾರಿ "ಈ ಮುದುಕರನ್ನು ಬಿಟ್ಟು ಹೊರಟುಬಿಡೋಣವೇ" ಎಂದು ಮನಸ್ಸಿಗೆ ತೋರುವುದು. ಹೀಗೇ ಇರಲು ಆತನಿಗೊಂದು ಸದವಕಾಶ ಒದಗಿಬಂತು.

ಆತನ ಬಂಧು "ನೀನುಹೋಗಿ ತೀರ್ಥಯಾತ್ರೆಮಾಡಿಕೊಂಡು ಬಾರಣ್ಣ. ನೀನು ಬರುವವರೆವಿಗೆ ನಿನ್ನವೃದ್ಧ ಮಾತಾಪಿತರನ್ನು ನಾನು ನೋಡಿಕೊಂಡಿರುತ್ತೇನೆ" ಎಂದ. ಆತನ ಭರವಸೆಯಮೇಲೆ ಭಕ್ತ ಕೂಡಲೇ ಹೊರಟುಬಿಟ್ಟ.

ಆತನು ಕೆಲವುದಿನಗಳಿಗೆ ಒಂದು ಅರಣ್ಯವನ್ನು ಪ್ರವೇಶಿಸಿದ. ಆ ಅರಣ್ಯದಲ್ಲಿ ಕುಕ್ಕುಟಮುನಿ ಎಂಬ ಮಹರ್ಷಿ ಇರುವನೆಂತಲೂ, ಆತನನ್ನು ಸಂದರ್ಶಿಸಿ ಅನೇಕರು ಪುನೀತರಾದರೆಂತಲೂ ಈ ಭಕ್ತನಿಗೆ ತಿಳಿಯಿತು.

ಆಶ್ರಮಕ್ಕೆಹೋಗಿ ನೋಡಲು, ಭಕ್ತನಿಗೆ ಆ ಮುನಿಪುಂಗವನು ತಪಸ್ಸನ್ನಾಚರಿಸುವುದು ಕಾಣಬರಲಿಲ್ಲ. ಸಂಸಾರತಾಪತ್ರಯಗಳಲ್ಲಿ ಮುಳುಗಿದ್ದ. ಭಕ್ತನು ಆತನ ಚರ್ಯೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುತ ಕುಳಿತುಕೊಂಡ.

ಸಿ. ವೆಂಕಟರಾಜ, ಅರಸೀಕೆರೆ




ಆ ಮುನಿ ಅಡಿಗೆಮಾಡಿದ. ಅಲ್ಲಿದ್ದ ಮುದಿ ದಂಪತಿಗಳಿಗೆ ಬಡಿಸಿದ. ಅವರಿಗೆಬೇಕಾದ ಇತರ ಸೌಕರ್ಯಗಳಕಡೆ ಗಮನಕೊಟ್ಟ. ಇದೆಲ್ಲಾ ಮುಗಿದತರುವಾಯ ಆತ ಹೊರಗೆ ಬಂದ.

ತನಗಾಗಿ ಎದುರುನೋಡುತ್ತ ಕುಳಿತಿದ್ದ ಭಕ್ತನನ್ನು ಕಂಡು "ಮಗೂ, ಯಾವ ಕೆಲಸಕ್ಕಾಗಿ ಬಂದೆ" ಎಂದು ಕೇಳಿದ ಆ ಮುನಿ.

ಅದಕ್ಕೆ ಭಕ್ತನು "ಮಹಾತ್ಮನೇ, ನಾನು ತೀರ್ಥಯಾತ್ರೆ ಮಾಡಲೋಸುಗ ಹೊರಟು, ನಿಮ್ಮ ಖ್ಯಾತಿ ಕೇಳಿ ದರ್ಶನಾಪೇಕ್ಷೆಗಾಗಿ ಬಂದೆ. ತ್ರಿವೇಣಿಸಂಗಮ ಇಲ್ಲಿಗೆ ತುಂಬಾ ಸನಿಯದಲ್ಲಿರುವುದೆಂದು ಹೇಳುವರು. ದಯವಿಟ್ಟು ನನಗೆ ದಾರಿ ತೋರಿಸುವಿರಾ" ಎಂದು



ವಿನಯಪೂರಿತವಾಗಿ ಕೇಳಿದ. ಅದಕ್ಕೆ ಆ ಮುನಿ "ಮಗೂ ವೃದ್ಧರಾದ ತಂದೆತಾಯಿಗಳನ್ನು ನೋಡಿಕೊಳ್ಳಬೇಕು. ಅವರನ್ನು ಬಿಟ್ಟು ಎಲ್ಲಿಗೂ ಹೋಗಲಾರೆ. ಆದುದರಿಂದ ನನಗೆ ತ್ರಿವೇಣಿಗೆ ದಾರಿ ತಿಳಿಯದು" ಎಂದು ಒಳಕ್ಕೆ ಹೊರಟುಬಿಟ್ಟ.

ತನಗೆ ಮುಕ್ತಿ ತೋರುವನೆಂದುಕೊಂಡ ಮುನಿಗೆ ಹತ್ತಿರದಲ್ಲೇ ಇರುವ ತ್ರಿವೇಣಿಗೆ ದಾರಿ ತಿಳಿಯದೆನ್ನಲು ಭಕ್ತನಿಗೆ ಆತನಲ್ಲಿದ್ದ ಗೌರವ ಮತ್ತಷ್ಟು ಕಡಿಮೆ ಆಯಿತು. "ಈ ಮುನಿಯ ಹಿರಿಮೆ ಏನಿದೆಯೋ ನನಗಂತೂ ಅರ್ಥವಾಗದು" ಎಂದು ಅಲ್ಲೇ ನಿಂತ.

ಅಷ್ಟರಲ್ಲಿ ಮೂವರು ಸ್ತ್ರೀಯರು ಆಶ್ರಮವನ್ನು ಪ್ರವೇಶಿಸಿದರು. ಅವರ ರೂಪ ತುಂಬಾ ಅಸಹ್ಯಕರವಾಗಿತ್ತು. ಕಪ್ಪುಕಪ್ಪಾಗಿ ಬಹಳ ವಿಕಾರವಾಗಿದ್ದರು.

ಇವರ ಬರುವಿಕೆಯಿಂದ ಭಕ್ತನಿಗೆ ಜಿಜ್ಞಾಸೆ ಇನ್ನಷ್ಟು ಹೆಚ್ಚಿತು. ಇವರು ಯಾರೋ ಏಕೆ ಬಂದರೋ ಎಂದುಕೊಂಡು ಅಲ್ಲೇ ನಿಂತಿದ್ದ.

ಸ್ವಲ್ಪಕಾಲ ಕಳೆದತರುವಾಯ ಮೂವರು ಅಪ್ಸರೆಯರು ಆಶ್ರಮದಿಂದ ಹೊರಬಿದ್ದರು. ಭಕ್ತನ ಆಶ್ಚರ್ಯಕ್ಕೆ ಮೇರೆ ಇಲ್ಲ. ಆತನಿಗಿನ್ನು ಸುಮ್ಮನಿರಲಾಗಲಿಲ್ಲ.

ಆ ಸುರಸುಂದರಿಯರ ಕಡೆ ತಿರುಗಿ "ಅಮ್ಮಾ ನೀವು ಯಾರು? ನಿಮಗಿಲ್ಲೇನು ಕೆಲಸ" ಎಂದು ಆತುರದಿಂದ ಪ್ರಶ್ನೆಮಾಡಿದ. ಆಗ ಅವರೆಂದರು "ಅಪ್ಪಾ, ನಾವು



ಮೂವರೂ ಸಹೋದರಿಯರು. ಈ ಲೋಕದಲ್ಲಿ ನಮನ್ನು ಗಂಗಾ, ಯಮುನಾ, ಸರಸ್ವತಿ ಎಂದು ಕರೆಯುವರು. ಪ್ರಯಾಗದ ಹತ್ತಿರ ನಾವು ಮೂವರೂ ಸೇರಿ ನದಿಯ ರೂಪದಲ್ಲಿ ಪ್ರವಹಿಸುತ್ತಿದ್ದೇವೆ. ತಪ್ಪುಮಾಡಿ ಪಾಪ ಪರಿಹಾರಮಾಡಿಕೊಳ್ಳುವ ತಾಪತ್ರಯದಲ್ಲಿ ದೇಶದೇಶಗಳಿಂದ ಜನ ಬಂದು ನಮ್ಮಲ್ಲಿ ಸ್ನಾನ ಮಾಡುವರು. ಹೆತ್ತ ತಂದೆತಾಯಿಗಳನ್ನು ಉಪೇಕ್ಷೆಮಾಡಿದವರೂ, ಮತ್ತು ಅನೇಕ ಹೀನ ಕಾರ್ಯಗಳನ್ನು ಎಸೆಗಿದವರೂ ಬಂದು ಸ್ನಾನ ಮಾಡುವುದರಿಂದ ನಮಗೆ ಇಂತಹ ಅಸಹ್ಯಕರವಾದ ರೂಪ ಉಂಟಾಗುತ್ತದೆ. ಅಂತಹ ಸ್ಥಿತಿಯಲ್ಲಿದ್ದ ನಾವು ಮೊದಲು ನಿನ್ನ ಕಣ್ಣಿಗೆ ಬಿದ್ದ ವಿಕಾರಾಕೃತಿಗಳು!"

"ಮತ್ತೆ ನೀವು ಯಾರು? ಎಂದ" ಭಕ್ತ.

"ಆ ವಿಕಾರ ಸ್ವರೂಪಿಗಳೇ ನಾವು. ಆಗಾಗ ಈ ಆಶ್ರಮಕ್ಕೆ ಬಂದು ಈ ಮಹಾನುಭಾವನ ದರ್ಶನ ಮಾಡುವುದರಿಂದ ನಮ್ಮ ಪಾಪಗಳೆಲ್ಲವೂ ತೊಲಗಿ ನಮ್ಮ ನಿಜ ಸ್ವರೂಪದೊಂದಿಗೆ ಮತ್ತೆ ಹೊರಗೆ ಬರುವೆವು. ನಮಗೆ ಸುತ್ತಿಕೊಂಡ ಪಾಪರಾಶಿ ಬಹಳವಾದಾಗ ನಾವು ಈ ಮಹಾತ್ಮನ ದರ್ಶನಕ್ಕೆ ಬರುತ್ತೇವೆ" ಎಂದು ಹೇಳಿ ಅದೃಶ್ಯರಾದರು.

ಆಗ ಭಕ್ತನ ಮನಸ್ಸಿನಲ್ಲುಂಟಾದ ಭಾವನೆಗಳು ಹೇಳಲಸಾಧ್ಯ. ಆತನಲ್ಲಿ ಒಂದು ದೊಡ್ಡ ಬದಲಾವಣೆ ಆಯಿತು. ತೀರ್ಥಯಾತ್ರೆಯ ದಾಹ ಕೂಡಲೇ ಮಾಯವಾಯಿತು.




ತತ್‌ಕ್ಷಣವೇ ಮನೆಯ ಕಡೆ ಹೊರಟ. ಅಂದಿನಿಂದ ತನ್ನ ಮಾತಾಪಿತರನ್ನು ಪ್ರತ್ಯಕ್ಷ ದೈವಗಳಂತೆ ಭಾವಿಸಿ, ಅವರಿಗೆ ಭಕ್ತಿಯಿಂದ ಸೇವೆ ಮಾಡುತ್ತಿದ್ದ.

ತ್ರಿವೇಣಿಗೆ ಹೋಗಿ ಸೇವೆಮಾಡಬೇಕೆಂದಿದ್ದ ಗಂಗಾ, ಯಮುನಾ, ಸರಸ್ವತಿಯರು ಈ ರೀತಿಯಾಗಿ ತನ್ನ ಕಣ್ಣಿಗೆ ಕಾಣಿಸಿದುದೇ ಮಹಾಭಾಗ್ಯವೆಂದು ಭಾವಿಸಿದ ಆ ಭಕ್ತ.

ಅಪ್ಸರೆಯರ ರೂಪದಲ್ಲಿ ಅಂದು ತನಗೆ ಕಾಣಿಸಿದ ಆ ಮೂವರು ಸಹೋದರಿಯರನ್ನು ಸದಾ ಸ್ಮರಣೆ ಮಾಡುತ್ತಾ ಆ ಭಕ್ತನು ಧನ್ಯನಾದ.

#  9ರ ಮಹತ್ತು 

(1) ಹಿಂದಿನ ಸಚಿಕೆಯಲ್ಲಿ 9 ರಿಂದ ಭಾಗಿಸಿದರೆ ಶೇಷವನ್ನು ಕುರಿತ ತಮಾಷೆ ತಿಳಿದುಕೊಂಡೆವು. ಈಸಾರಿ ಶೇಷ ಉಳಿಯದಂತಹ ಗಮ್ಮತ್ತು ತಿಳಿಯೋಣ.

ಉದಾಹರಣೆಗೆ: 16486 ಎಂಬ ಸಂಖ್ಯೆಗಳನ್ನೆಲ್ಲಾ ಕೂಡಿಸಿದರೆ ಬರುವ ಮೊತ್ತ 25. ಮೇಲಿನ ಸಂಖ್ಯೆಯಲ್ಲಿ 25 ಕಳೆದುಬಿಟ್ಟರೆ 16461 ಉಳಿಯುತ್ತದೆ. ಈ 16461ನ್ನು 9 ರಿಂದ ಭಾಗಿಸಿದರೆ 1829 ಬರುವುದು. ಶೇಷ ಬರುವುದಿಲ್ಲ. ಇದೇರೀತಿ ಯಾವ ಸಂಖ್ಯೆಯಾದರೂ

ಎಸ್. ನಾಗರಾಜನ್, ಸೇಲಂ

(2) 9 ಅಂಕೆಯಿಂದ ಒಂದು ವಿಚಿತ್ರವಾದ ಸಂಕಲನ ನೋಡಿ—

| | | | | | | | | |
|---|---|---|---|---|---|---|---|---|
| 12 | 13 | 14 | 15 | 16 | 17 | 18 | 19 | 20 |
| 9 | 9 | 9 | 9 | 9 | 9 | 9 | 9 | 9 |
| 2 | 2 | 2 | 2 | 2 | 2 | 2 | 2 | 2 |
| 1 | 2 | 3 | 4 | 5 | 6 | 7 | 8 | 9 |

ಕೆ. ಲಲಿತಾಮನೋಹರ

(3) ಕಳೆಯುವುದರಲ್ಲಿ ತಮಾಷೆ: ಯಾವುದಾದರೊಂದು ಸಂಖ್ಯೆಯನ್ನು ತೆಗೆದುಕೋ. ಉದಾಹರಣೆಗಾಗಿ 64328 ತೆಗೆದುಕೊಳ್ಳೋಣ. ಈ ಅಂಕಿಗಳನ್ನು ಕೂಡಿದರೆ 23 ಬರುತ್ತದೆ. ಈಗ ಈ 64328 ರಲ್ಲಿ ಈ 23 ನ್ನು ಕಳೆ. 64305 ಉಳಿಯುತ್ತದೆ. ಈ ಐದು ಅಂಕಿಗಳಲ್ಲಿ ನಿನ್ನಸ್ನೆಹಿತನು ಯಾವುದೋ ಒಂದು ಅಂಕಿ ನೆನೆಸಿಕೊಂಡು, ಉಳಿದ ಅಂಕಿಗಳ ಮೊತ್ತವನ್ನು ಹೇಳುವಂತೆ ಹೇಳು. ಆತನು 4 ಎಂಬ ಅಂಕಿಯನ್ನು ನೆನೆಸಿದ್ದರೆ ಅದನ್ನು ಸುಲಭವಾಗಿ ಹೇಳಿಬಿಡಲು ಸಾಧ್ಯವಿದೆ. ನಿನ್ನಸ್ನೇಹಿತ ನೆನೆಸಿದ್ದ ಅಂಕಿ 4 ಆದರೆ ಮಿಕ್ಕ ಅಂಕಿಗಳು 6305. ಅಂದರೆ ಇವುಗಳ ಮೊತ್ತ 14. ಈ 14 ನ್ನು ಮತ್ತೆ ಕೂಡಿದರೆ 1+4=5. ಈರೀತಿ ಕೂಡಿದ ಸಂಖ್ಯೆಯಲ್ಲಿ 9 ನ್ನು ಕಳೆದುಬಿಟ್ಟರೆ ಉಳಿಯುವುದು 4. ಇದೇತಾನೇ ನಿನ್ನಗೆಳೆಯ ನೆನೆಸಿದ್ದ ಅಂಕಿ.

ಡಿ. ಸಿದ್ದರಾಮಪ್ಪ

(4) ಹತ್ತು ಮೊದಲುಗೊಂಡು ಅಂಕಿಗಳನ್ನು ಸಾಲಾಗಿ ಬರೆದು, ಆ ಸಂಖ್ಯೆಯನ್ನು 9 ರಿಂದ ಗುಣಿಸು. ಗುಣಿಸಿದರೆ ಬರುವ ಮೊತ್ತದಲ್ಲಿ ಬರುವ ಚಮತ್ಕಾರ ನೋಡು.

$$\begin{array}{r} 10987654321 \\ 9 \\ \hline 98888888889 \\ \hline \end{array}$$

ಗಿರಿಜಾಶಂಕರ್ ವಿ. ಮೆಸ್ತಾ - ಸಿರ್ಸಿ



# ಸಮಪಾಲು

ಒಂದು ಊರಿನಲ್ಲಿ ಒಬ್ಬ ಚಿತ್ರಪಟಗಳ ವ್ಯಾಪಾರಿ ಇದ್ದ. ಆತನು ಸಾಮಾನ್ಯವಾಗಿ ಹೆಚ್ಚು ಹಣಕೊಟ್ಟು ತಂದ ಪಟಗಳನ್ನು ಅಲ್ಪ ಬೆಲೆಗೆ ಮಾರಬೇಕಾದ ಸಂಭವ ಬರುತ್ತಿತ್ತು.

ಒಂದೊಂದುಸಾರಿ ಪಟಗಳಿಗೆ ಗಿರಾಕಿ ಸಿಕ್ಕದಿದ್ದರೆ ಬೇಸರವಾಗಿ ಯಾವುದೋ ಒಂದು ಬೆಲೆಗೆ ಮಾರುವನು. ಪಟಗಳನ್ನು ಎಷ್ಟೇ ಕಡಿಮೆಬೆಲೆಗೆ ಮಾರಲು ಸಿದ್ಧವಾದರೂ ಸಹ, ಕೊಳ್ಳುವವರು ಏನೋ ಒಂದು ರೀತಿ ಅಭಿಮಾನದಿಂದಲೇ ಕೊಂಡುಕೊಳ್ಳುವಂತೆ ತೋರುತ್ತಿದ್ದರು.

ಒಂದುಸಾರಿ ಆತನು ಒಂದು ಪುಣ್ಯಸ್ಥಳಕ್ಕೆ ಹೋದ. ಅಲ್ಲಿ ಹಳೇ ವಸ್ತುಗಳನ್ನು ಮಾರುವ ಅನೇಕ ಅಂಗಡಿಗಳಿದ್ದುವು. ಅವುಗಳನ್ನು ನೋಡುತ್ತಾ ಹೋಗುತ್ತಿರಲು ಒಂದು ಅಂಗಡಿಯಲ್ಲಿ ಚಿತ್ರಪಟವೊಂದು ಆತನ ದೃಷ್ಟಿಯನ್ನು ಆಕರ್ಷಿಸಿತು.

ಅದು ನೀಲಿ ಬಣ್ಣದಿಂದ ಚಿತ್ರಿಸಿದ ಒಂದು ಅದ್ಭುತ ಚಿತ್ರ. ಅದನ್ನು ಯಾರೋ ಪ್ರಸಿದ್ಧ ಚಿತ್ರಕಾರನು ಬರೆದಿರಬಹುದೇ ಹೊರತು ಸಾಮಾನ್ಯರು ಬರೆದಂತೆ ಕಾಣಿಸಲಿಲ್ಲ. ಆದರೆ ಆ ಪಟದ ತುದಿಯಲ್ಲಿ ಹೆಸರು ಇರಲಿಲ್ಲವಾದ ಕಾರಣ ಇವರೇ ಬರೆದರೆಂದು ನಿರ್ದಿಷ್ಟವಾಗಿ ಹೇಳುವಂತಿರಲಿಲ್ಲ.

ಏನಾದರಾಗಲಿ ಎಂದುಕೊಂಡು "ಅಯ್ಯಾ ಈ ಪಟದ ಬೆಲೆ ಎಷ್ಟು?" ಎಂದು ಕೇಳಿದ ನಮ್ಮ ವರ್ತಕ ಅಂಗಡಿಯವನನ್ನು.

ಅದಕ್ಕೆ ಅಂಗಡಿಯವನು "ಈ ಪಟವನ್ನು ನೋಡಿದವರೆಲ್ಲಾ ಇದು ರವಿವರ್ಮನ ಪಟದಂತಿದೆ ಎಂದು ಮೆಚ್ಚಿಕೊಳ್ಳುವರು. ಆದರೆ ಪಟದ ಮೇಲೆ ಆತನ ಸಹಿ ಇಲ್ಲದ್ದರಿಂದ ಏನೊಂದೂ ನಿರ್ಧರಿಸುವಂತಿಲ್ಲ. ಸಹಿ ಇಲ್ಲದ ಚಿತ್ರವಾದುದರಿಂದ ಐದು ರೂಪಾಯಿ ಬೆಲೆ ಹೇಳುತ್ತಿದ್ದೇನೆ. ಬೇಕಿದ್ದಲ್ಲಿ ತೆಗೆದುಕೋ" ಎಂದ.

ಚಿತ್ರಕಾರನ ಸಹಿ ಇಲ್ಲವೆಂದ ಕೂಡಲೇ ವರ್ತಕನು ತುಸ ಆಲೋಚನೆಯಲ್ಲಿ ಬಿದ್ದ. ಅವನು ಯೋಚನೆ ಮಾಡುತ್ತಿರುವುದನ್ನು

ಜಯಲಕ್ಷ್ಮಿ ರಾಮರಾವು, ಮೈಸೂರು




ನೋಡಿ ಅಂಗಡಿಯವನು ಮತ್ತೆ ಹೇಳಿದ "ನಾನು ಈ ಪಠವನ್ನು ಮುಂಬಯಿಯಲ್ಲಿ ಕೊಂಡುಕೊಂಡೆ. ಮುಂದಿನವಾರ ಅಲ್ಲಿಗೆ ಮತ್ತೆ ಹೋಗೋಣವೆಂದಿದ್ದೇನೆ. ಆಗ ವಿಚಾರಿಸುತ್ತೇನೆ. ಇದು ರವಿವರ್ಮನ ಪಠವೇ ಎಂದು ರೂಢಿಯಾದರೆ ಇದರ ಬೆಲೆ ನಿರ್ಣಯಿಸಲೇ ಕಷ್ಟವಾಗಬಹುದು. ಈಗಮಾತ್ರ ಏನೊಂದೂ ತಿಳಿಯದ ಕಾರಣ ಐದು ರೂಪಾಯಿಗೆ ಮಾರಲು ಸಿದ್ಧನಿದ್ದೇನೆ. ನಿಮ್ಮ ಇಷ್ಟ."

ಕೂಡಲೇ ವರ್ತಕನು ಐದುರೂಪಾಯಿ ಕೊಟ್ಟು ಆ ಪಠವನ್ನು ಕೊಂಡುಕೊಂಡ.

ತನ್ನ ಊರನ್ನು ಸೇರಿಕೊಂಡಕೂಡಲೇ, ಹೊಸದಾಗಿಕೊಂಡು ತಂದಿದ್ದ ಆ ಪಠವನ್ನು ಅಂಗಡಿಯಲ್ಲಿ ನೇತುಹಾಕಿದ.



ಅದು ಎಲ್ಲರ ಗಮನವನ್ನು ಸೆಳೆಯಿತು. ಅದನ್ನು ಪಡೆಯಲು ದೊಡ್ಡ ದೊಡ್ಡ ಮನುಷ್ಯರು ತಾಮುಂದೆ ತಾಮುಂದೆ ಎಂದು ಮುಂದೆಬಂದರು.

ಆ ಪಠದ ವೈಖರಿಯನ್ನು ನೋಡಿ ಕೆಲವರು ಅದು ರವಿವರ್ಮನದೇ ಹೊರತು ಮತ್ತೆ ಯಾರದೂ ಅಲ್ಲವೆಂದು ನಿರ್ಧಾರಕ್ಕೆ ಬಂದರು. ಒಬ್ಬಾತ ಅದನ್ನು ನೂರು ರೂಪಾಯಿಗಳಿಗೆ ಕೊಂಡುಕೊಂಡ.

ಇದು ಆ ವರ್ತಕನ ಜೀವಮಾನದಲ್ಲಿ ಅಪೂರ್ವವಾದ ಘಟ್ಟ. ಅಷ್ಟೊಂದು ಅಲ್ಪ ಹಣಕ್ಕೆ ಕೊಂಡ ಪಠವನ್ನು ಈಭಾರಿ ಮೊತ್ತಕ್ಕೆ ಆ ವರ್ತಕ ಮಾರಿದ್ದು ಅದೇ ಮೊದಲನೇಸಾರಿ. ಆತನ ಆನಂದಕ್ಕೆ ಪಾರವೇಯಿಲ್ಲ.

ಕೂಡಲೇ ಆತನಿಗೆ ಒಂದು ಯೋಚನೆ ಹೊಳೆಯಿತು. ನನ್ನ ಈ ಅದೃಷ್ಟಕ್ಕೆಕಾರಣ ಆ ಅಂಗಡಿಯವ. ಆತನು ತುಂಬಾ ನ್ಯಾಯಶಾಲಿ. ಪಠದ ಒಳಿತು ಕೆಡಕುಗಳನ್ನು ಯಾವುದೊಂದುವಿಧವಾದ ಮುಚ್ಚುಮರೆಯಿಲ್ಲದೆ ಹೇಳಿದ. ಆತನು ಹೇಳಿದಂತೆಯೇ ಜನ ಇದು ರವಿವರ್ಮನ ಪಠವೆಂದು ನಂಬಿ ಈ ಪಠದಮೇಲೆ ಮೋಜುಬಿದ್ದರು. ಆದುದರಿಂದ ನನಗೆ ಬಂದ ಲಾಭದಲ್ಲಿ ಅರ್ಧಭಾಗ ಅಂಗಡಿಯವನಿಗೆ ಕೊಡುವುದು ನ್ಯಾಯ" ಎಂದುಕೊಂಡ.

ಈ ಯೋಚನೆ ಬಂದಕೂಡಲೇ ಆ ಅಂಗಡಿಯವನಿಗೆ ಒಂದು ಕಾಗದದಮುಖಾಂತರ





ತನ್ನ ಉದ್ದೇಶವನ್ನು ತಿಳಿಸಲು ಅಂಚೆಕಛೇರಿಗೆ ಹೋದ.

ಆತ ಅಲ್ಲಿಗೆ ಹೋಗುವ ವೇಳೆಗೆ ಕಛೇರಿ ಮುಚ್ಚಿತ್ತು. ಸ್ಟಾಂಪು ಸಿಕ್ಕಲಿಲ್ಲ. ಆದುದರಿಂದ ಅಂದು ಅಂಚೆಗೆ ಕಾಗದ ಹಾಕಲಾಗಲಿಲ್ಲ.

ಮಾರನೆಯ ದಿನ ಮತ್ತೆ ಆತನಿಗೆ ಈ ವಿಷಯ ಜ್ಞಾಪಕಕ್ಕೆ ಬಂತು. "ಆ ಅಂಗಡಿಯವನಿಗೆ ಕಾಗದ ಬರೆಯುವುದು ಹುಂಬತನ. ಇದು ರವಿವರ್ಮನ ಪಠವೆಂದು ತಿಳಿದೇ ಆತ ನನಗೆ ಮಾರಿದ್ದಾನೆ; ತಿಳಿಯದೇನೂ ಅಲ್ಲ! ಆದುದರಿಂದ ಲಾಭವಲ್ಲಿ ಅರ್ಧಭಾಗ ಏಕೆಕೊಡಬೇಕು. ಹತ್ತು ರೂಪಾಯಿ ಕಳುಹಿಸಿದರೆ ಸಾಕು" ಎಂದುಕೊಂಡ.



ತರುವಾಯ ಈ ಮಾತು ಹಿಂದೆಹಾಕಿ ತನ್ನ ಕೆಲಸಬೊಗಸೆಗಳಲ್ಲಿ ನಿರತನಾದ. ಮತ್ತೆ ಪಠದ ವಿಷಯ ಜ್ಞಾಪಕಕ್ಕೆ ಬಂತು. ಈಸಾರಿ ಆತನ ಮನಸ್ಸು ಮತ್ತೆ ಕಲಕಿತು. ಬೇರೊಂದು ಬಗೆಯ ಯೋಚನೆ ತಲೆ ಎತ್ತಿತು.

"ನಾನು ಆ ಅಂಗಡಿಯವನಿಗೆ ಹತ್ತು ರೂಪಾಯಿ ಕಳುಹಿಸಿದರೆ ಕೇಡೆಣಿಸಿದವನಾಗುವೆನು. ಹೇಗೆಂದರೆ, ಈ ಹತ್ತು ರೂಪಾಯಿ ಆತನ ಕೈ ಸೇರಿದರೆ, ತನ್ನ ಹತ್ತಿರ ಸರಕು ಪಡೆಯುವ ಪ್ರತಿಯೊಬ್ಬರೂ ನನ್ನಂತೆ ಉದಾರಿಗಳಾಗಿರುವರೆಂತಲೂ, ನ್ಯಾಯ, ಧರ್ಮಗಳನ್ನು ಪಾಲಿಸಿ ಹಣ ಕಳುಹಿಸುತ್ತಿರುವರೆಂತಲೂ ಭ್ರಮೆಗೊಳ್ಳುವನು. ಈ ಭ್ರಮೆ ಇಲ್ಲಸಲ್ಲದ ಆಶೆ ಉಂಟುಮಾಡುತ್ತದೆ. ಆಶೆ ದುರಾಶೆಯಾಗಿ ಬದಲಾಯಿಸಿ, ಕೊನೆಗೆ ದುಃಖವನ್ನುಂಟುಮಾಡಬಹುದು. ಅದರಿಂದಾಗಿ ಹತ್ತು ರೂಪಾಯಿ ಕಳುಹಿಸುವುದೂ ಶ್ರೇಯಸ್ಕರವಲ್ಲ" ಎಂದು ನಿರ್ಧರಿಸಿದ.

'ಹೋಗಲಿ, ಹತ್ತು ಬೇಡ, ಆತನ ಶ್ರೇಯಸ್ಸನ್ನು ಕೋರಿ ಐದು ರೂಪಾಯಿ ಕಳುಹಿಸುವೆನು. ಆಗ ನಾನು ಮಾಡಿದ ಕೆಲಸ ಕೇವಲ ಸ್ವಲಾಭವೆನ್ನಿಸಿಕೊಳ್ಳಲಾರದು" ಎಂದುಕೊಂಡ.

ಆ ಮಾರನೆಯ ದಿನ ಉಡುಪನ್ನು ಧರಿಸುತ್ತಿರುವಾಗ ಮತ್ತೆ ಈ ವಿಷಯ ಜ್ಞಪ್ತಿಗೆ ಬಂತು.

"ಲಕ್ಷ್ಮಿ ನನ್ನನ್ನು ಕೋರಿ ವರಿಸಿದಳು. ಆ ಪಠ ನನ್ನ ಹತ್ತಿರ ಹೆಚ್ಚು ಬೆಲೆಗೆ ವ್ಯಾಪಾರ

ವಾಯಿತು. ಭಾಗ್ಯದೇವತೆ ನನಗೆ ಅನುಗ್ರಹಿಸಿದ್ದನ್ನು ಬೇರೊಬ್ಬರಿಗೆ ಕೊಡುವುದೇಕೆ? ಏನೋ ಅಂದುಕೊಂಡ ಆ ಅಂಗಡಿಯವನಿಗೆ, ಏನಾದರೂ ಕೊಡೋಣ ಅಂತ. ಅದ್ದರಿಂದ ಒಂದು ರೂಪಾಯಿ ಕೊಟ್ಟುಬಿಡ್ತೇನೆ. 'ನಿನ್ನ ಹತ್ತಿರ ಕೊಂಡ ಪಠಕ್ಕೆ ಇಷ್ಟು ಲಾಭ ಬಂತು, ಅಂತ ಒಂದು ಕಾಗದ ಬರೆದರೆ ಸಾಕು. ಆ ಅಂಗಡಿಯವನು ಸಂತೋಷಪಡುತ್ತಾನೆ. ಹಾಗಿರುವಲ್ಲಿ ನನ್ನ ಕೃತಜ್ಞತೆ ತಿಳಿಸುತ್ತಾ ಒಂದು ರೂಪಾಯಿ ಬೇರೆ ಬಹಮಾನವಾಗಿ ಕೊಡಲು ನಿಶ್ಚಯಿಸಿದ್ದೇನಲ್ಲಾ. ಇನ್ನೇನು?'' ಎಂದು ಸಮಾಧಾನಮಾಡಿಕೊಂಡ.

ಹೀಗೆಂದುಕೊಂಡು ಆ ವರ್ತಕ ಒಂದು ರೂಪಾಯಿ ನೋಟು ತೆಗೆದು ಕವರಿನಲ್ಲಿಟ್ಟು, ಅಂಚೆಪೆಟ್ಟಿಗೆಯಲ್ಲಿ ಹಾಕಲು ಸಿದ್ಧಮಾಡಿಟ್ಟುಕೊಂಡ.

ಅದನ್ನು ಕಿಸೆಯಲ್ಲಿಟ್ಟುಕೊಂಡು ಊಟ ಮಾಡಿಕೊಂಡು ಬರಲು ಹೋದ. ಆ ತರುವಾಯ ಅಂಚೆಕಛೇರಿಗೆ ಹೋಗುತ್ತಿರಲು ದಾರಿಯಲ್ಲಿ ಒಂದೆಡೆ ಕೆಲವರು ಜೂಜಾಡುತ್ತಿರುವುದು ಕಾಣಿಸಿತು.

ಆತನಿಗೆ ದುರ್ಬುದ್ಧಿ ಜನಿಸಿ, ಜೂಜಿನಲ್ಲಿ ಇಳಿದ. ಆಡಿ ಆಡಿ ಇದ್ದ ಹಣವೆಲ್ಲಾ ಕಳೆದುಕೊಂಡ. ಚಿಲ್ಲರೆ ಸಹ ಉಳಿಯಲಿಲ್ಲ. ಕಡೆಗೆ ವ್ಯಸನದಿಂದಲೂ, ನಿಸ್ಪೃಹತೆಯಿಂದಲೂ ಎದ್ದು ಹೋಗುವಾಗ ಕಿಸೆ ತಡವಿಕೊಳ್ಳಲು ಆತನ ಕೈಗೆ ಕವರು ಸಿಕ್ಕಿತು.

ಆ ಕವರಿನಲ್ಲಿದ್ದ ರೂಪಾಯಿಯಿಂದ ಮತ್ತೆ ಜೂಜಾಡಿ, ಕಳೆದುಕೊಂಡ ಹಣವಷ್ಟೇ ಅಲ್ಲದೆ ಮತ್ತಷ್ಟು ಹಣವನ್ನೂ ಗೆದ್ದ. ಎಲ್ಲಾ ಎಣಿಸಿ ನೋಡಲು ನೂರು ರೂಪಾಯಿ ಲಾಭ ಬಂದಿತ್ತು.

ಮರು ಆಲೋಚನೆಯಿಲ್ಲದೆ ಆತನು ಮೊದಲು ತಾನು ನೆನೆಸಿದ್ದ ಹಣವನ್ನು ಆ ಅಂಗಡಿಯವನಿಗೆ ಕಳುಹಿಸಿಬಿಟ್ಟ.

ಆತನು ಸದ್ಬುದ್ಧಿಯಿಂದ ಆ ಅಂಗಡಿಯವನಿಗೆ ಕಳುಹಿಸಬೇಕೆಂದಿದ್ದ ಆ ಒಂದು ರೂಪಾಯಿ ಕೊನೆಗೆ ಆತನನ್ನು ಈ ರೀತಿ ಕಾಪಾಡಿತು.






# ಶಿಲಾವಿಗ್ರಹ

ಒಂದು ಪಟ್ಟಣ. ಆ ನಗರದ ಮಧ್ಯೆ ಒಂದು ದೊಡ್ಡ ಶಿಲಾಪೀಠದಮೇಲೆ ರಾಜನ ಚಿನ್ನದ ಪ್ರತಿಮೆಯಿತ್ತು. ಆ ಪ್ರತಿಮೆಯ ಕಣ್ಣುಗಳಿಗೆ ಎರಡು ನೀಲಗಳನ್ನು ಹುದುಗಿಸಲಾಗಿತ್ತು. ರಾಜನ ಖಡ್ಗದಮೇಲೊಂದು ಭಾರೀ ರತ್ನ ಹುದುಗಿಸಿತ್ತು. ವಿಗ್ರಹದ ಮೇಲೆ ಸೂರ್ಯನ ಕಿರಣಗಳು ಬಿದ್ದು, ಪ್ರಕಾಶಿಸಿದಾಗ ರಾಜನು ಆನಂದತುಂದಿಲನಂತೆ ಕಾಣಿಸುವನು.

ಒಂದು ದಿನ ಸಾಯಂಕಾಲ ಗುಬ್ಬಚ್ಚಿಯೊಂದು ಆ ನಗರವನ್ನು ಪ್ರವೇಶಿಸಿತು. 'ರಾತ್ರಿ ಎಲ್ಲಿ ಕಳೆಯಲಿ?' ಎಂದು ಯೋಚಿಸುತ್ತಿದ್ದ ಆ ಗುಬ್ಬಚ್ಚಿಗೆ ನಗರದ ಮಧ್ಯೆಯಿದ್ದ ಈ ಪ್ರತಿಮೆ ಕಾಣಿಸಿತು. 'ಎತ್ತರದಲ್ಲಿದ್ದರೆ ಒಳ್ಳೆಯ ಗಾಳಿ ಬರುತ್ತದೆ. ನಗರವೂ ಚೆನ್ನಾಗಿ ಕಾಣಿಸುತ್ತದೆ' ಎಂದು ಪ್ರತಿಮೆಯ ಪಾದಗಳ ಬಳಿ ಠಿಕಾಣಿ ಮಾಡಿತು. ಗುಬ್ಬಚ್ಚಿ ಕಣ್ಣು ಮುಚ್ಚೋಣವೆನ್ನುವ ಸಮಯಕ್ಕೆ ಸರಿಯಾಗಿ ನೀರಿನತೊಟ್ಟೊಂದು ಮೇಲೆ ಬಿತ್ತು. ಅದು ಅತ್ತಿತ್ತ ನೋಡಿತು. ಆಕಾಶದಲ್ಲಿ ಮೋಡಗಳ ಚಿಹ್ನೆಯೇ ಇಲ್ಲ. ಚಂದಿರನೂ ನಕ್ಷತ್ರಗಳೂ ಕಾಣಿಸುತ್ತಲೇ ಇವೆ. ಏನಿದು ವಿಚಿತ್ರ? ಎಂದು ಯೋಚಿಸುತ್ತಿರುವಾಗ ಮತ್ತೊಂದು ನೀರಿನ ತೊಟ್ಟು ಮೇಲೆ ಬಿತ್ತು. ಗುಬ್ಬಚ್ಚಿಗೆ ಅನುಮಾನವುಂಟಾಗಿ ತಲೆ ಮೇಲಕ್ಕೆತ್ತಿ ನೋಡಿತು. ವಿಗ್ರಹ ಕಣ್ಣೀರು ಸುರಿಸುತ್ತಿದೆ! ಸದಾ ಆನಂದದಿಂದಿರುವ ವಿಗ್ರಹದ ಕೆನ್ನೆಗಳ ಮೇಲೆ ಕಣ್ಣೀರು ನೋಡಿ ಗುಬ್ಬಚ್ಚಿಗೆ ಮರುಕವುಂಟಾಯಿತು "ನೀವು ಯಾರು?" ಎಂದು ಕೇಳಿತು ಗುಬ್ಬಚ್ಚಿ. "ನಾನು ದುಃಖವೆಂಬುದನ್ನು ತಿಳಿಯದ ರಾಜ" ಎಂದಿತು ವಿಗ್ರಹ. "ಮತ್ತೆ ಹಾಗಾದರೇಕೆ ಕಣ್ಣೀರು ಸುರಿಸುತ್ತಿರುವಿರಿ?" ಎಂದಿತು ಗುಬ್ಬಚ್ಚಿ.

ಅದಕ್ಕೆ ಆ ವಿಗ್ರಹ ಜವಾಬು ಕೊಟ್ಟಿತು. "ನಾನು ಜೀವಿಸಿರುವಾಗ ಎಂದೂ ಬಾಧೆಪಟ್ಟದ್ದಿಲ್ಲ. ಕೋಟೆಯೊಳಕ್ಕೆ ದುಃಖವೆಂಬುದೇ ಪ್ರವೇಶಿಸಿರಲಿಲ್ಲ. ತುಂಬಾ ಸುಖವಾಗಿದ್ದೆ.

ಜಿ. ರಾಮಕೃಷ್ಣನಾಯಕ, ಹರಿಹರ






ಕೋಟೆ ಗೋಡೆಯ ಹೊರಗೆ ಏನು ನಡೆಯುತ್ತಿತ್ತೋ ಎಂದೂ ವಿಚಾರಿಸಲಿಲ್ಲ. ಸತ್ತು ಹೋದ ಮೇಲೆ ನನ್ನ ವಿಗ್ರಹವನ್ನು ಇಷ್ಟು ಎತ್ತರದಲ್ಲಿ ಪ್ರತಿಷ್ಠೆ ಮಾಡಿದರು. ಇಲ್ಲಿಂದ ನಗರದಲ್ಲಿ ನಡೆಯುವ ಪ್ರತಿ ವಿಷಯವೂ ಕಾಣಿಸುವುದು. ನನ್ನ ಹೃದಯ ಸೀಸದಿಂದ ಎರಕ ಹೊಯ್ದಿರುವುದಾದರೂ ಕರುಣಾಪೂರಿತವಾದುದು. ಅಳದೆ ಏನು ಮಾಡಲಿ?"

ತನ್ನೊಂದಿಗೆ ಮಾತನಾಡುವುದು ಒಂದು ವಿಗ್ರಹವೆಂಬ ವಿಷಯ ಜ್ಞಾಪಕಕ್ಕೆ ಬಂದು ಗುಬ್ಬಚ್ಚಿಗೆ ಬಹಳ ಆಶ್ಚರ್ಯವಾಯಿತು. ವಿಗ್ರಹ ಮತ್ತೆ ಹೇಳಿತು: 'ದೂರದಲ್ಲಿ ಹುಲ್ಲಿನ ಜೋಪಡಿಯೊಂದರಲ್ಲಿ ಬಡಸಂಸಾರವೊಂದಿದೆ. ಒಬ್ಬಾಕೆ ಸೊರಗಿಸುಕ್ಕುಗೂಡಿದ ಶರೀರ, ಬಿಳಿಚಿಕೊಂಡ ಮುಖದಿಂದ, ಹಣತೆಯನ್ನಿಟ್ಟುಕೊಂಡು ಹೊಲಿಯುತ್ತಿರುವಳು. ಹಲವು ಬಾರಿ ಸೂಜಿ ಬೆರಳಿಗೆ ಚುಚ್ಚಿಕೊಂಡರೂ ಅದರಪರಿವೇಯೇ ಇಲ್ಲ ಆಕೆಗೆ. ಪಕ್ಕದಲ್ಲಿ ರೋಗಗ್ರಸ್ತನಾದ ಹುಡುಗನೊಬ್ಬ ಮಂಚದಮೇಲೆ ಮಲಗಿದ್ದಾನೆ. ಅವನಿಗೆ ಹಸಿವು ಆಗುತ್ತಿದೆ. ಕಿತ್ತಳೆಯ ರಸಕೊಡುವಂತೆ ತಾಯಿಯನ್ನು ಪೀಡಿಸುತ್ತಿದ್ದಾನೆ. ಆ ಬಾಧೆ ನೋಡಿದರೆ ನನ್ನ ಕಣ್ಣೀರು ನಿಲ್ಲುವಂತಿಲ್ಲ. ಎಲೈ, ಗುಬ್ಬಚ್ಚಿಯೇ ನನಗೊಂದು ಸಹಾಯಮಾಡಬಲ್ಲೆಯಾ?'

'ಏನದು?' ಎಂದಿತು ಗುಬ್ಬಚ್ಚಿ. 'ನೋಡು, ನನ್ನ ಖಡ್ಗದ ಹಿಡಿಯಲ್ಲಿ ಬೆಲೆಬಾಳುವ ರತ್ನವೊಂದು ಹುದುಗಿಸಲ್ಪಟ್ಟಿದೆ. ಅದನ್ನು ತೆಗೆದುಕೊಂಡು ಹೋಗಿ ಅವರಿಗೆ ಕೊಡಬೇಕು.'

'ಹಗಲೆಲ್ಲಾ ಹಾರಿಹಾರಿ ಆಯಾಸಗೊಂಡಿದ್ದೇನೆ. ಮತ್ತೆ ಬೆಳಗಿನ ಜಾವದಲ್ಲೇ ಹಾರಿ ಪರದೇಶಕ್ಕೆ ಹೋಗಬೇಕು.' ಎಂದಿತು ಗುಬ್ಬಚ್ಚಿ. 'ಕಷ್ಟದಲ್ಲಿ ಸಿಲುಕಿರುವವರಮೇಲೆ ಸಹಾನೂಭೂತಿಯಿಡಬೇಕು.' ಎಂದ ರಾಜ. ಗುಬ್ಬಚ್ಚಿಯ ಮನಕರಗಿತು. ರಾಜನಿಗೆ ಸಹಾಯಮಾಡಲು ಒಪ್ಪಿಕೊಂಡಿತು.

ರಾಜನು ಹೇಳಿದ ಪ್ರಕಾರ ಅದು ಆತನ ಖಡ್ಗದಮೇಲಿದ್ದ ರತ್ನವನ್ನು ಕೊಕ್ಕಿನಿಂದ ಕಚ್ಚಿಕೊಂಡು ಹಾರಿಹೋಗಿ ಆ ಬಡವರ ಮನೆಯನ್ನು ಪ್ರವೇಶಿಸಿತು. ಹುಡುಗ ಬಾಧೆಯಿಂದ ಅತ್ತಿತ್ತ ಉರುಳಾಡುತ್ತಿದ್ದಾನೆ.







ತಾಯಿ ಆಯಾಸಗೊಂಡು ನಿದ್ದೆಮಾಡು ತ್ತಿದ್ದಾಳೆ. ಗುಬ್ಬಚ್ಚಿ ಮೆಲ್ಲನೆ ಆಕೆಯನ್ನು ಪಕ್ಕಕ್ಕೆತಳ್ಳಿ, ಹುಡುಗನಿಗೆ ತನ್ನ ರೆಕ್ಕೆಗಳಿಂದ ಗಾಳಿಬೀಸಲು ಪ್ರಾರಂಭಿಸಿತು. ಆ ತಣ್ಣನೆಯ ಗಾಳಿಗೆ ಆತನಿಗೆ ಕೂಡಲೇ ನಿದ್ದೆ ಬಂತು.

ಗುಬ್ಬಚ್ಚಿ ರಾಜನ ಹತ್ತಿರಬಂದು ನಡೆದ ವಿಷಯವನ್ನೆಲ್ಲಾ ಹೇಳಿ ಹೀಗೆಂದಿತು. 'ಚಳಿ ವಿಪರೀತವಾಗಿದ್ದರೂಸಹ ಅದೇನೋ ನನ ಗಿಂದು ತುಂಬ ಸಂತೋಷವಾಗಿದೆ'

'ನಿಜ, ಒಳ್ಳೆಯ ಕೆಲಸಮಾಡಿದರೆ ಹಾಗೇ ಅನ್ನಿಸುತ್ತಿದೆ' ಎಂದ ರಾಜ.

ಮಾರನೇಯದಿನ ಅಷ್ಟು ಚಳಿಯಲ್ಲೂ ಪಟ್ಟಣದಲ್ಲೆಲ್ಲಾ ಹಾರಾಡಿತು ಗುಬ್ಬಚ್ಚಿ. ಮಿಕ್ಕ ಗುಬ್ಬಚ್ಚಿಗಳಿಗೆ ಈ ಹೊಸ ಗುಬ್ಬಚ್ಚಿಯಲ್ಲಿ ಏನೋ ಒಂದು ವಿಶೇಷವಿರುವಂತೆ ತೋರಿತು. ಇದನ್ನು ಕಂಡು ಗುಬ್ಬಚ್ಚಿಗೆ ತುಸ ಹೆಮ್ಮೆ ಯುಂಟಾಯಿತು. ರಾತ್ರಿ ಚಂದ್ರೋದಯ ವಾದಮೇಲೆ ಗುಬ್ಬಚ್ಚಿ ರಾಜನ ಹತ್ತಿರ ಹೋಗಿ "ಈ ರಾತ್ರಿ ನಾನು ಹೊರಟುಬಿಡುತ್ತೇನೆ" ಎಂದಿತು. "ಎಲೈ ಗುಬ್ಬಚ್ಚಿಯೇ, ದೂರದಲ್ಲಿ ಒಂದು ಶಿಥಿಲವಾದ ಗೃಹದಲ್ಲಿ ಒಬ್ಬಯುವಕ ನಿದ್ದಾನೆ. ಆತ ಕಾಗದದ ಮುಂದೆ ಬಳಲಿ ಕುಳಿತಿದ್ದಾನೆ. ಈ ಚಳಿಗೆ ಬೆರಳುಗಳು ಮುದುಡಿ, ಹಸಿವು ತಾಳಲಾರದೆ, ಬರೆಯ ಲಾರದ ಸ್ಥಿತಿಯಲ್ಲಿ ಬಾಧೆಪಡುತ್ತಿರುವನು" ಎಂದ ದುಃಖವರಿಯದ ರಾಜ. ಈ ಸಾರಿ ಗುಬ್ಬಚ್ಚಿ ಮೇಲೆ ಮೇಲೆ ಹೇಳಿಸಿಕೊಳ್ಳಲಿಲ್ಲ.




"ಸರಿ, ಈ ರಾತ್ರಿ ಸಹ ನಿಮ್ಮ ಹತ್ತಿರ ಇರು ವೆನು. ಒಂದು ರತ್ನವನ್ನು ಆ ಯುವಕನಿಗೆ ಕೊಟ್ಟು ಬರಲೇ?" ಎಂದಿತು.

"ನನ್ನ ಹತ್ತಿರ ಇನ್ನೂ ರತ್ನಗಳಿಲ್ಲ. ಆದರೆ ನನ್ನ ಎರಡು ಕಣ್ಣುಗಳಿಗೆ ಎರಡು ನೀಲ ಗಳನ್ನು ಇಟ್ಟಿದ್ದಾರೆ. ಒಂದನ್ನು ತಗೆದು ಕೊಂಡು ಹೋಗಿ ಆತನಿಗೆ ಕೊಟ್ಟು ಬಾ."

"ನಿಮ್ಮ ಕಣ್ಣನ್ನು ಕೀಳಲಾರೆ" ಎಂದು ಗುಬ್ಬಚ್ಚಿ ಕಣ್ಣೀರು ಹಾಕಿತು. "ನಾನು ಹೇಳಿದಂತೆ ಮಾಡು ಗುಬ್ಬಚ್ಚಿ" ಎಂದು ರಾಜ ಪುಸಲಾಯಿಸಿದ. ಕೊನೆಗೆ ಗುಬ್ಬಚ್ಚಿ ಒಪ್ಪಿ ಕೊಳ್ಳಲೇ ಬೇಕಾಯಿತು.

ನೀಲಮಣಿಯನ್ನು ಕೊಕ್ಕಿನಲ್ಲಿ ಕಚ್ಚಿ ಕೊಂಡು ಹಾರಿತು. ಆ ಕವಿಯ ಮನೆಗೆ








ಬಾಗಿಲಿರಲಿಲ್ಲ. ಒಳಗೆ ಸುನಾಯಾಸವಾಗಿ ಪ್ರವೇಶಿಸಿತು. ಕವಿ ಬಳಲಿಹೋಗಿ ಎರಡು ಕೈಗಳಿಂದ ಮುಖವನ್ನು ಮುಚ್ಚಿಕೊಂಡಿದ್ದ ನಾದುದರಿಂದ ಗುಬ್ಬಚ್ಚಿ ಬಂದ ವಿಷಯವೇ ಆತನಿಗೆ ತಿಳಿಯದು. ಸ್ವಲ್ಪಸಮಯವಾದ ಮೇಲೆ ಎಚ್ಚರವಾಗಿನೋಡಿದರೆ ಪಕ್ಕ ದಲ್ಲೊಂದು ನೀಲಮಣಿಯಿದೆ! 'ನನ್ನ ರಚನೆ ಗಳನ್ನು ಜನ ಮೆಚ್ಚಿಕೊಳ್ಳುತ್ತಿದ್ದಾರೆ. ಯಾರೋ ಇದನ್ನು ನನಗೆ ಬಹುಮಾನವಾಗಿ ಕಳುಹಿಸಿದ್ದಾರೆ" ಎಂದುಕೊಂಡ ಕವಿ.

ಮಾರನೇಯ ದಿನ ಗುಬ್ಬಚ್ಚಿ ಊರೆಲ್ಲಾ ಸುತ್ತಾಡಿತು. ಚಂದ್ರೋದಯವಾಗುವವೇಳೆಗೆ ರಾಜನ ಹತ್ತಿರ ಬಂದು "ನಾನು ಹೋಗು ವೆನು. ಹೇಳಿಬಿಟ್ಟು ಹೋಗೋಣವೆಂತ ಬಂದೆ" ಎಂದಿತು. "ಗುಬ್ಬಚ್ಚಿಯೇ, ಈ ಒಂದು ರಾತ್ರಿ ನನ್ನೊಂದಿಗಿರು" ಎಂದು ಕೇಳಿಕೊಂಡ ರಾಜ. "ಇಲ್ಲ. ನಮ್ಮ ನೆಂಟರು ನನಗಾಗಿ ಕಾದಿರುತ್ತಾರೆ. ಪಾಪ! ಒಂದು ರತ್ನ ಒಂದು ನೀಲವನ್ನು ಕಳೆದುಕೊಂಡೆ. ಬರುವ ಚಳಿಗಾಲಕ್ಕೆ ನಾನಿಲ್ಲಿಗೆ ಬರುವೆನು. ಆಗ ನಿನಗೊಂದು ನೀಲ ಮತ್ತು ಒಂದು ರತ್ನವನ್ನು ತಂದು ಕೊಡುವೆನು. ಈಗ ಅಪ್ಪಣೆಯಾಗಲಿ" ಎಂದಿತು.

"ಗುಬ್ಬಚ್ಚಿ, ದೂರದಲ್ಲಿ ಸಣ್ಣ ಹುಡುಗಿ ಯೊಬ್ಬಳಿದ್ದಾಳೆ. ಬೆಂಕಿಪೆಟ್ಟಿಗೆಮಾರಿ ಜೀವಿಸು ವಳು. ಕಾಲುಜಾರಿ ಬಿದ್ದು ಬೆಂಕಿಪೆಟ್ಟಿಗೆಗಳು ಪಕ್ಕದಲ್ಲಿದ್ದ ಚರಂಡಿಯಲ್ಲಿ ಬಿದ್ದುಬಿಟ್ಟವು. ಹಣವಿಲ್ಲದೆ ಮನೆಗೆ ಹೋದರೆ ತಂದೆ ಹೊಡೆ ಯುತ್ತಾನೆ. ಆದುದರಿಂದ ಅಳುತ್ತಾ ಕುಳಿ ತಿದ್ದಾಳೆ. ನನ್ನ ಎರಡನೇ ಕಣ್ಣನ್ನು ಅವಳಿ ಗಿತ್ತು ಬಾ" ಎಂದ ರಾಜ.

"ಬೇಕಾದರೆ ಇಂದು ರಾತ್ರಿಸಹ ನಿನ್ನೊಂ ದಿಗಿರುತ್ತೇನೆ. ಆದರೆ ಎರಡನೇ ಕಣ್ಣನ್ನುಸಹ ತೆಗೆಯಲಾರೆ. ನೀನು ಕುರುಡನಾಗುವೆ" ಎಂದಿತು ಗುಬ್ಬಚ್ಚಿ.

"ಚಿಂತೆಯಿಲ್ಲ. ಗುಬ್ಬಚ್ಚಿ, ನಾನು ಹೇಳಿ ದಂತೆ ಮಾಡಮ್ಮಾ!" ಎಂದು ರಾಜ ಬಲ ವಂತಮಾಡಿದ.

ಗುಬ್ಬಚ್ಚಿ ರಾಜನ ಎರಡನೇ ಕಣ್ಣನ್ನು ಕೀಳುವುದು ತಪ್ಪಲಿಲ್ಲ. ಆ ನೀಲಮಣಿಯನ್ನು ಕೊಕ್ಕಿನಿಂದ ಕಚ್ಚಿಕೊಂಡು ಹೋಗಿ ಆ ಸಣ್ಣ

ಹುಡುಗಿಯ ಕೈಯಲ್ಲಿ ಕೊಟ್ಟಿತು. "ಬಹಳ ಚೆನ್ನಾಗಿದೆ" ಎಂದು ಆನಂದದಿಂದ ಕಣ್ಣೀರು ಒರಸಿಕೊಳ್ಳದೆಯೇ ಆ ಹುಡುಗಿ ಮನೆಗೆ ಓಡಿದಳು.

ಗುಬ್ಬಚ್ಚಿ ವ್ಯಾಕುಲದಿಂದ ರಾಜನ ಹತ್ತಿರ ಬಂದು "ನಾನು ಸದಾ ನಿನ್ನೊಂದಿಗೇ ಇರುತ್ತೇನೆ. ಅಂಧನಾಗಿ ನೀನು ಹೇಗೆ ಜೀವಿಸಬಲ್ಲೆ?" ಎಂದಿತು.

"ಇಲ್ಲ. ನಿಮ್ಮವರು ನಿನಗಾಗಿ ಎದುರು ನೋಡುತ್ತಿರುತ್ತಾರೆ. ಹೋಗು" ಎಂದ ರಾಜ.

"ಹೋಗುವುದಿಲ್ಲ. ಇಲ್ಲೇ ಇರುತ್ತೇನೆ" ಎಂದು ಹೇಳಿ ಗುಬ್ಬಚ್ಚಿ ಅಂದು ರಾತ್ರಿ ಸಹ ರಾಜನ ಪಾದಗಳಬಳಿ ನಿದ್ದೆಮಾಡಿತು.




ಮಾರನೇಯ ದಿನ ಗುಬ್ಬಚ್ಚಿ ನಗರದಲ್ಲಿ ಸುತ್ತಾಡಲು ಹೋಗಲಿಲ್ಲ. ರಾಜನ ಭುಜದ ಮೇಲೆ ಕುಳಿತುಕೊಂಡು ತಾನು ಸುತ್ತಿರುವ ಪ್ರದೇಶಗಳಲ್ಲಿನ ವಿಚಿತ್ರಗಳನ್ನು ಹೇಳುತ್ತಿತ್ತು. ಎಷ್ಟೋ ವಿಚಿತ್ರಗಳನ್ನು ಕೇಳಿದ ರಾಜನು "ಇವುಗಳೆಲ್ಲಕ್ಕಿಂತಲೂ ವಿಚಿತ್ರವಾದುದು ಮಾನವನ ಬಾಧೆ. ಗುಬ್ಬಚ್ಚಿ, ನಾನು ಆಳಿದ ಈ ರಾಜ್ಯದಲೆಲ್ಲಾ ಸುತ್ತಾಡಿ ಪ್ರಜೆಗಳ ಬಾಧೆಯನ್ನು ನನಗೆ ತಿಳಿಸುತ್ತಿರು" ಎಂದ.

ಗುಬ್ಬಚ್ಚಿ ಪಟ್ಟಣವೆಲ್ಲಾ ಸುತ್ತಾಡುತಿತ್ತು. ಕೆಲವರ ಮನೆಯಲ್ಲಿ ಭೋಜನಕೂಟ ಏರ್ಪಟ್ಟಿತ್ತು. ಅವರು ತಿಂದು ಬಿಸುಡುವ ಎಂಜಲಿಗಾಗಿ ಬಡವರು ಅವರ ಮನೆ ಮುಂದೆ ಕಾದು ಕುಳಿತಿದ್ದಾರೆ. ಸಂದುಗೊಂದುಗಳಲ್ಲಿ ಹಸಿವಿನ ಬಾಧೆಯಿಂದ ತೊಳಲಾಡುತ್ತಿರುವ ಸಣ್ಣ ಮಕ್ಕಳ ಕರುಣಾಜನಕವಾದ ಸ್ಥಿತಿ ಗುಬ್ಬಚ್ಚಿಯ ಕಣ್ಣಿಗೆ ಬಿತ್ತು.

ಗುಬ್ಬಚ್ಚಿ ಈ ವಿಷಯವನ್ನು ರಾಜನಿಗೆ ತಿಳಿಸಿತು. "ನನ್ನ ಶರೀರದ ತುಂಬಾ ಬಂಗಾರದ ತೊಡಿಗೆಯಿದೆ. ಒಂದೊಂದನ್ನೇ ತೆಗೆದು ನನ್ನ ಬಡ ಪ್ರಜೆಗಳಿಗೆ ಹಂಚು. ಅದರಿಂದ ಅವರು ಸುಖಪಡುವರು" ಎಂದ ರಾಜ.

ಗುಬ್ಬಚ್ಚಿ ಒಂದೊಂದೇ ತೊಡಿಗೆಯನ್ನು ತೆಗೆದು ಬಡವರಿಗೆ ಹಂಚಲು ಪ್ರಾರಂಭಿಸಿತು. ಕೊನೆಯಲ್ಲಿ ರಾಜನ ವಿಗ್ರಹದಲ್ಲಿ ಕಂಚು ಹೊರತು ಮತ್ತೇನೂ ಉಳಿಯಲಿಲ್ಲ. ಆದರೆ ಬಡ ಹುಡುಗರು ಈಗ ಸಂತೋಷವಾಗಿ ಆಡಿಕೊಳ್ಳುತ್ತಿದ್ದಾರೆ.

ಚಳಿ ಹೆಚ್ಚಾಯಿತು. ಮಂಜು ವಿಪರೀತ ವಾಗಿ ಬೀಳುತ್ತಿತ್ತು. ಗುಬ್ಬಚ್ಚಿಗೆ ಚಳಿ ತಾಳಲಾರದಂತಾದರೂ ಸಹ ರಾಜನನ್ನು ಬಿಟ್ಟು ಹೋಗಲಿಲ್ಲ. ಪಾಪ, ಅದು ದಿನದಿನಕ್ಕೆ ಕೃಶವಾಗಿ ಮೃತ್ಯುಮುಖವನ್ನು ಹಿಡಿಯುತ್ತಿತ್ತು.

ಇನ್ನು ಉಳಿಯುವ ಆಶೆಯಿಲ್ಲ. ರಾಜನ ಅಪ್ಪಣೆ ಪಡೆಯುವ ಸಲುವಾಗಿ "ರಾಜನೇ, ನಾನು ನಿನ್ನ ಕೈಯನ್ನು ಮುತ್ತಿಡಲೇ?" ಎಂದಿತು. "ಕೈಯಲ್ಲ, ನನ್ನ ತುಟಿಗಳನ್ನೇ ಬೇಕಾದರೆ ಮುತ್ತಿಡು. ನಿಮ್ಮ ದೇಶಕ್ಕೆ ಹೋಗುತ್ತಿರುವೆಯೇನು?" ಎಂದ ರಾಜ.

"ಇಲ್ಲ, ನಾನಿನ್ನೂ ದೂರ ಪ್ರಯಾಣ ಮಾಡುವುದರಲ್ಲಿದ್ದೇನೆ. ಇನ್ನು ಮತ್ತೆ ಬರುವುದಿಲ್ಲ" ಎಂದಿತು ಗುಬ್ಬಚ್ಚಿ.

ರಾಜನ ತುಟಿಯನ್ನು ಮುದ್ದಿಟ್ಟು ಗುಬ್ಬಚ್ಚಿ ಸತ್ತು ಆತನ ಪಾದಗಳ ಬಳಿ ಬಿತ್ತು. ಇದೇ ಸಮಯಕ್ಕೆ ಸರಿಯಾಗಿ ಏನೋ ಬ್ರಹ್ಮಾಂಡವೇ ಸೀಳಿದಂತೆ ಕೇಳಿಸಿತು. ಸೀಸದಿಂದ ಎರಕ ಹೊಯ್ದ ರಾಜನ ಹೃದಯ ಇಬ್ಭಾಗವಾಗಿ ಸೀಳಿಕೊಂಡಿತು.

ಮಾರನೆಯ ದಿನ ನಗರದ ಹಿರಿಯರು ಆ ದಾರಿಯಲ್ಲಿ ಬರುತ್ತಾ ರಾಜನ ವಿಗ್ರಹ ನೋಡಿ "ಈ ವಿಗ್ರಹ ಅಂದವಾಗಿ ಕಾಣಿಸುತ್ತಿಲ್ಲ. ಇದು ಇಲ್ಲಿ ಇದ್ದರೆ ನಮ್ಮ ನಗರದ ಗೌರವಕ್ಕೆ ಕುಂದು" ಎಂದು ತೆಗೆದು ಹಾಕಿದರು. ಅದರ ಸ್ಥಾನದಲ್ಲಿ ಯಾರ ವಿಗ್ರಹ ಇಡಬೇಕೆಂಬ ಜಿಜ್ಞಾಸೆ ಹುಟ್ಟಿತು. ನನ್ನದು ತನ್ನದು ಎಂದು ಕಾದಾಡಿದರು. ಅವರ ಕಾದಾಟ ಹೊಡೆದಾಟ ಇಂದಿಗೂ ನಿಂತಿಲ್ಲ.

ಹಳೇ ವಿಗ್ರಹವನ್ನು ಕರಗಿಸಿದರು. ಎಷ್ಟೇ ಕಾಯಿಸಿದರೂ ಆ ಸೀಸದ ಹೃದಯಮಾತ್ರ ಕರಗಲೇ ಇಲ್ಲ. ಕಡೆಗೆ ಬೇಸರವಾಗಿ ಅದನ್ನು ಒಂದೆಡೆ ಬಿಸಾಡಿದರು.

ದೇವರು ಒಂದು ದಿನ "ಪಟ್ಟಣದಿಂದ ಎರಡು ಅಮೂಲ್ಯ ವಸ್ತುಗಳನ್ನು ತನ್ನಿ" ಎಂದ. ದೇವದೂತರು ಊರೆಲ್ಲಾ ಸುತ್ತಿ, ಸತ್ತು ಹೋದ ಗುಬ್ಬಚ್ಚಿಯನ್ನೂ, ಆ ಸೀಸದ ಹೃದಯವನ್ನೂ ತೆಗೆದುಕೊಂಡು ಹೋದರು. "ಸಾಟಿಯಿಲ್ಲದ ವಸ್ತುಗಳಿವು" ಎಂದು ದೇವರೂ ಸಹ ಮೆಚ್ಚಿಕೊಂಡ.






# ಮೂವರು ಸಹೋದರರು

ಕ್ಷೇಮೇಂದ್ರನು ಗಿರಿದುರ್ಗದ ಅಧಿಪತಿ. ಆತನಿಗೆ ನಂಬಿಗಸ್ಥನಾದ ಸೇನಾಧಿಪತಿಯಿದ್ದ. ಆದರೆ ಆ ಸೇನಾಧಿಪತಿ 'ಈ ರಾಜನು ಯಾವಾಗ ಸಾಯುವನೋ, ಯಾವಾಗ ಈ ರಾಜ್ಯದ ಅಧಿಕಾರ ನನ್ನ ಕೈಗೆ ಸಿಗುವುದೋ' ಎಂದು ಕಾದುಕೊಂಡಿದ್ದ. ರಾಜನು ಮರಣ ಹೊಂದಿದ ಕೆಲವು ದಿನಗಳಲ್ಲೇ ರಾಜ್ಯವು ಸೇನಾಧಿಪತಿಯ ವಶವಾಯಿತು. ಹಾಗೆ ರಾಜ್ಯವು ವಶವಾದಕೂಡಲೇ ಆತನು ರಾಜ ವಂಶದವರೊಂದಿಗೆ ತುಂಬ ಕ್ರೂರವಾಗಿ ವರ್ತಿಸಲು ಪ್ರಾರಂಭಿಸಿದ.

ಕ್ಷೇಮೇಂದ್ರನಿಗೆ ನಂದ, ಸುನಂದ, ಆನಂದ ಎಂಬ ಮೂವರು ಮಕ್ಕಳು. ಸೇನಾಧಿಪತಿ ಕೊಡುವ ಯಾತನೆಗಳನ್ನು ತಡೆಯಲಾರದೆ ಅವರು ಮೂವರೂ ಓಡಿ ಹೋಗಿ ಒಂದು ಮರುಭೂಮಿ ಪ್ರದೇಶವನ್ನು ಸೇರಿದರು. ಆ ಸಮೀಪದಲ್ಲೇ ಅವರಿಗೊಂದು ಸುಂದರವಾದ ಕುಟೀರ ಕಾಣಿಸಿತು. ಅಲ್ಲಿ ಒಬ್ಬ ವೃದ್ಧನೂ, ಮತ್ತು ಆತನ ಮಗಳೂ ಕಾಣಿಸಿದರು.

ಅವರು ಆಯಾಸಗೊಂಡಿದ್ದ ರಾಜಕುಮಾರರನ್ನು ಒಳಗೆ ಕರೆದುಕೊಂಡು ಹೋಗಿ ಅತಿಥಿ ಸತ್ಕಾರಮಾಡಿದರು. ರಾತ್ರಿ ತಮ್ಮ ಕುಟೀರದಲ್ಲೇ ಮಲಗಿಕೊಳ್ಳುವಂತೆ ಹಠ ಹಿಡಿದು ಉಳಿಸಿಕೊಂಡರು.

ಮೂವರು ಸಹೋದರರು ಆ ರಾತ್ರಿ ಒಂದು ಏಕಾಂತ ಸ್ಥಳದಲ್ಲಿ ಕುಳಿತು ತಮ್ಮ ರಾಜ್ಯವನ್ನು ಮತ್ತೆ ಪಡೆಯುವ ವಿಧವನ್ನು ಚರ್ಚಿಸುತ್ತಿದ್ದರು. ಅವರು ಕತ್ತಲಲ್ಲಿ ಕುಳಿತಿರುವುದನ್ನು ನೋಡಿ ಆ ವೃದ್ಧನ ಮಗಳು ಇಂದುಮತಿ ಒಂದು ದೀಪ ತಂದು ಅಲ್ಲಿಟ್ಟಳು. ಆಕೆ ಸಹ ಅಲ್ಲೇ ಕುಳಿತುಕೊಂಡು ಅವರ ಸಂಭಾಷಣೆ ಕೇಳುತ್ತಿದ್ದಳು.

ಹಿರಿಯವನಾದ ನಂದನು 'ಪ್ರಪಂಚದಲ್ಲಿ ಮನುಷ್ಯನಿಗೆಬೇಕಾದುದುಅಧಿಕಾರ. ಕೈಯಲ್ಲಿ ಅಧಿಕಾರವಿದ್ದುದರಿಂದಲೇ ಅಲ್ಲವೇಸೇನಾಧಿಪತಿ ನಮ್ಮ ರಾಜ್ಯವನ್ನು ಅಪಹರಿಸಿದ' ಎಂದ.

ಎರಡನೇಯವನಾದ ಸುನಂದನೆಂದ: 'ಹಣವಿದ್ದರೆ ಅದರೊಂದಿಗೆ ಅಧಿಕಾರವೂ ಬರು

ಕುಮಾರಿ ಗಿರಿಜಾ, ಕುಂದಾಪುರ




ತ್ತದೆ. ಅಧಿಕಾರಕ್ಕೋಸ್ಕರ ಬೇರೆ ಪ್ರಯತ್ನ ಮಾಡುವುದೇಕೆ?’

ಕಡೆಯವನಾದ ಆನಂದ ತನ್ನ ಮನಸ್ಸಿನಲ್ಲಿದ್ದ ಉದ್ದೇಶವೇನೂ ಹೇಳಲಿಲ್ಲ. ಇಂದುಮತಿಯ ಕಡೆಯೇ ನೋಡುತ್ತಾ ಕಳಿತಿದ್ದ. ಅಣ್ಣಂದಿರಿಬ್ಬರೂ ‘ನೀನು ಏನೂ ಹೇಳಲಿಲ್ಲವಲ್ಲಾ ತಮ್ಮಾ’ ಎಂದರು. ಅದಕ್ಕೆ ಆನಂದ ‘ಅದನ್ನೇ ಆಲೋಚಿಸುತ್ತಿದ್ದೇನೆ’ ಎಂದು ಹೇಳಿ ಸುಮ್ಮನಾದ.

ಬೆಳಗಾಯಿತು. ಅಣ್ಣಂದಿರಿಬ್ಬರೂ ಕುಟೀರದಿಂದ ಹೊರಗೆ ಬಂದರು. ಮರುಭೂಮಿಯಲ್ಲಿ ಬಿಡಾರಹಾಕಿದ್ದ ವರ್ತಕರ ಗುಂಪೊಂದು ಅವರಿಗೆ ಕಾಣಿಸಿತು. ನಂದನು “ನಾನು ಈಶಾನ್ಯ ದಿಕ್ಕಿನಲ್ಲಿಹೋಗಿ ಹತ್ತು ವರ್ಷಕ್ಕೆ ದೊಡ್ಡ ಸೈನ್ಯದೊಂದಿಗೆ ಬರುವೆನು. ನಾವು ಮತ್ತೆ ಇಲ್ಲೇ ಸೇರೋಣ” ಎಂದು ಹೇಳಿ ಪ್ರಯಾಣಮಾಡಿದ.

“ನಾನು ವಾಯುವ್ಯದಿಕ್ಕಿನಲ್ಲಿ ಹೊರಟು, ಹತ್ತು ವರ್ಷಕ್ಕೆ ಐಶ್ವರ್ಯವಂತನಾಗಿ ಮತ್ತೆ ಇಲ್ಲಿಗೆ ಬರುತ್ತೇನೆ” ಎಂದ ಸುನಂದ.

ಇಬ್ಬರೂ ಕಿರಿಯವನ ಕಡೆ ಪ್ರಶ್ನಾರ್ಥಕವಾಗಿ ನೋಡಿದರು. ಆನಂದನು “ನಾನೀ ಸಮಸ್ಯೆಯನ್ನು ಆಲೋಚಿಸುತ್ತಲೇ ಇದ್ದೇನೆ. ನಾನೂ ಸಹ ಹತ್ತು ವರ್ಷಕ್ಕೆ ನಿಮ್ಮನ್ನು ಈ ಕುಟೀರದ ಹತ್ತಿರವೇ ಸೇರುವೆನು” ಎಂದ.

ಅಣ್ಣತಮ್ಮಂದಿರಿಗೆ ನಡೆದ ಈ ಸಂಭಾಷಣೆ ಎಲ್ಲವನ್ನೂ ವೃದ್ಧನೂ, ಆತನ ಕುವರಿಯೂ ಕೇಳುತ್ತಿದ್ದರು. ಕಾಲಚಕ್ರ ತಿರುಗುತ್ತಿತ್ತು.

* * *

**ಹ**ತ್ತು ವರ್ಷಗಳಾದಮೇಲೆ:

ಆ ಕುಟೀರದ ಸುತ್ತಲೂ ಇದ್ದ ಹೂವಿನ ಬಳ್ಳಿಗಳೂ, ಗಿಡಗಳೂ ಬೆಳೆದು ಅದೊಂದು ಪರ್ಣಶಾಲೆಯಂತೆ ಶೋಭಿಸುತ್ತಿತ್ತು. ಇಂದುಮತಿಯು ಸುಂದರವಾದ ಶಿಶುವನ್ನು ಕಂಕುಳಲ್ಲಿ ಎತ್ತಿಕೊಂಡು ಕುಟೀರದ ಬಾಗಿಲಿನ ಹತ್ತಿರ ನಿಂತು ಮರುಭೂಮಿಯ ಕಡೆ ನೋಡುತ್ತಿದ್ದಳು.

ಆಕೆ ಹಾಗೆ ನೋಡುತ್ತಿರುವಾಗ ಒಂದು ಕಡೆಯಿಂದ ಅಶ್ವದಳವೂ, ಮತ್ತೊಂದು ಕಡೆ ಪದಾತಿ ದಳವೂ, ವಸ್ತುಗಳನ್ನು ಹೇರಿಸುವ ಒಂಟೆಗಳೂ, ಹೇಸರಕತ್ತೆಗಳೂ ಬರುವುದು

ಕಾಣಿಸಿತು. ಕೆಲ ಹೊತ್ತಿಗೆಲ್ಲಾ ಆ ಮರು ಭೂಮಿ ಸೈನಿಕರಿಂದ ತುಂಬಿಹೋಯಿತು. ಸೈನ್ಯವೂ, ಯುದ್ಧಸನ್ನದ್ಧ ಪ್ರಾಣಿ ಸಮೂಹ ಗಳೂ ಸಾಲುಗಟ್ಟಿ ನಿಂತವು. ಒಬ್ಬ ಆಜಾನು ಬಾಹು ಆಜ್ಞೆಗಳನ್ನು ಮಾಡುತ್ತಿದ್ದಾನೆ.

ಇನ್ನೊಂದು ಕಡೆಯಿಂದ ಮತ್ತೊಂದು ಸೇನೆಯ ಸಾಲು ಬರುತ್ತಿತ್ತು. ಆ ಪ್ರಾಣಿಗಳ ಬೆನ್ನಿನ ಮೇಲೆ ಹೇರಿದ್ದ ಚೀಲಗಳು ಮಣಿ ಮಾಣಿಕ್ಯಗಳಿಂದ ತುಂಬಿದ್ದವು. ಮೀಸೆ ತಿರುವು ತ್ತಿದ್ದ ಒಬ್ಬ ಲಂಬೋದರನು ಇವುಗಳ ಅಧಿ ಪತಿಯಾಗಿ ಕಾಣಿಸಿದ.

ಆಜಾನುಬಾಹು, ಲಂಬೋದರರು ಕುಶಲ ಪ್ರಶ್ನೆಗಳನ್ನಾಡಿಕೊಂಡರು. ನಂದನೇ ಆಜಾನು ಬಾಹು; ಸುನಂದನೇ ಲಂಬೋದರ. "ಈಗ ನಾನು ಪ್ರಪಂಚದಲ್ಲಿ ಏನನ್ನಾ ದರೂ ಸಾಧಿಸಬಲ್ಲೆ. ಅದಕ್ಕೆ ಆವಶ್ಯಕವಾದ ಹಣ ನನಗೆ ಪುಷ್ಕಳವಾಗಿದೆ" ಎಂದ ಸುನಂದ.

ನಂದ ತನ್ನ ಸೈನ್ಯದ ಕಡೆ ಕೈ ತೋರಿಸಿ "ಇದು ನನ್ನ ಸೈನ್ಯ. ನಾನು ಇದರ ಅಧಿ ಪತಿ. ಈ ಸೈನ್ಯದಿಂದ ನಾನು ಏನೆಲ್ಲವನ್ನೂ ಸಾಧಿಸಬಲ್ಲೆ" ಎಂದ ಅಹಂಕಾರದಿಂದ.

"ಈ ಸೈನ್ಯಗಳ ಅಧಿಕಾರಿ ಎಂದು ಗರ್ವ ಪಡಬೇಡ. ಮನಸ್ಸುಮಾಡಿದರೆ ನಿನ್ನ ಸೈನ್ಯ ವನ್ನೆಲ್ಲಾ ಕೊಂಡುಕೊಳ್ಳಬಲ್ಲೆ. ಇದೇ ರೀತಿ ಯಾಗಿ ನಮ್ಮ ಗಿರಿದುರ್ಗವನ್ನು ಸಹ ವಶ ಮಾಡಿಕೊಳ್ಳಬಲ್ಲೆ" ದರ್ಪದಿಂದ ಸುನಂದ



ತನ್ನ ಅಣ್ಣನೊಂದಿಗೆ ಹೇಳಿದ. “ಸೈನ್ಯಾಧಿಕಾರಿ ಎಂದರೆ ಏನೆಂದು ತಿಳಿದಿರುವೆ? ನಾನು ಆಜ್ಞೆ ಕೊಟ್ಟರೆ ಸಾಕು. ನಿನ್ನನ್ನೂ, ನಿಮ್ಮ ಧನವನ್ನೂ ನಿಮಿಷಮಾತ್ರದಲ್ಲಿ ಲೂಟಿಮಾಡುವರು ನನ್ನ ಸೈನಿಕರು” ಎಂದ ನಂದ.

ಸಹೋದರರಿಬ್ಬರೂ ಈರೀತಿ ವಾದ ವಿವಾದಮಾಡುತ್ತಿರಲು ಕೊನೆಯವನಾದ ಆನಂದನು ನಗುತ್ತಾ ಅವರ ಹತ್ತಿರ ಬಂದ. ಆತನ ಒಂದೊಂದು ಕೈಯನ್ನೂ ಒಬ್ಬೊಬ್ಬ ಮಗನು ಹಿಡಿದುಕೊಂಡಿದ್ದಾನೆ. ಆತನ ಹಿಂದೆ ಮೊಲೆಗೂಸನ್ನು ಎತ್ತಿಕೊಂಡು ಇಂದುಮತಿ ಸಹ ಬಂದಳು.

ಅಣ್ಣಂದಿರಿಬ್ಬರೂ ತಮ್ಮನಕಡೆ ಆಶ್ಚರ್ಯಚಕಿತರಾಗಿ ನೋಡಿದರು. ತಮ್ಮ ತಮ್ಮ ಪ್ರಭಾವಗಳನ್ನು ಹೇಳಿಕೊಂಡರು. ‘ಈ ಹತ್ತು ವರ್ಷಗಳಲ್ಲಿ ನೀನೇನು ಸಾಧಿಸಿದೆ?’ ಎಂದು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು.

“ಇದೋ, ಇದೇ” ಎಂದಂತೆ ಆನಂದ ಒಂದುಸಾರಿ ತನ್ನ ಮಕ್ಕಳ ಕಡೆ ನೋಡಿದ. ಅಣ್ಣಂದಿರಿಬ್ಬರೂ ಮತ್ತೆ ಹೊಡೆದಾಟ ಪ್ರಾರಂಭಿಸಿದರು. ಅದರಲ್ಲಿ ತಾವು ಮಹಾ ಘನಕಾರ್ಯ ಮಾಡಿದೆವೆಂಬ ಅಹಂಕಾರ ಪ್ರಬಲವಾಗಿತ್ತು.

ಆಗ ಆನಂದನು ಅವರಿಬ್ಬರನ್ನೂ ಕುಟೀರದೊಳಗೆ ಕರೆದೊಯ್ದು ಸಮಾಧಾನಮಾಡಿ. ಅವರಿಗೆಲ್ಲ ಸೌಕರ್ಯಗಳನ್ನೂ ನೀಡಿ, ಅವರ ಮನಸ್ಸು ಸ್ಥಿಮಿತಗೊಂಡಮೇಲೆ ಒಂದು ಪತ್ರ ತೆಗೆದು ತೋರಿಸಿದ. ಆ ಪತ್ರ ಗಿರಿದುರ್ಗದ ಪ್ರಜೆಗಳು ಬರೆದುದಾಗಿತ್ತು.

“ನಮಗೆ ದ್ರೋಹಮಾಡಿದ ಸೇನಾಧಿಪತಿ ಮರಣಿಸಿದನಂತೆ. ರಾಜ್ಯವನ್ನು ಪಾಲಿಸಬೇಕೆಂದು ಪ್ರಜೆಗಳು ನನ್ನನ್ನು ಬಂದು ಕೋರಿದರು. ಪತ್ರಗಳನ್ನು ಮೇಲಿಂದಮೇಲೆ ಬರೆಯುತ್ತಿದ್ದಾರೆ. ಆದರೆ ನಾನು ನಿಮಗಾಗಿ ಇಲ್ಲಿ ಕಾದಿದ್ದೇನೆ. ನಮ್ಮ ತಂದೆಯ ರಾಜ್ಯವನ್ನು ಪಡೆಯಲು ನೀವಿನ್ನು ಕಷ್ಟಪಡಬೇಕಾಗಿಲ್ಲ. ಇದಕ್ಕಾಗಿ ಸೇನೆ ಬೇಡ; ಹಣದ ಅಗತ್ಯವೂ ಇಲ್ಲ” ಎಂದ ಆನಂದ.

ಇಂಗಿತಜ್ಞನಾದ ತಮ್ಮನು ಮಾಡಿದ ಕೆಲಸಕ್ಕೆ ಅಣ್ಣಂದಿರಿಬ್ಬರೂ ಆನಂದಗೊಂಡರು.



# ನೊರೆಗುಳ್ಳೆ ಹೇಗೆ ಆಗುತ್ತದೆ?



ನೊರೆಗುಳ್ಳೆ ಸಣ್ಣ ಸಣ್ಣ ನೀರಿನ ತುಂತುರುಗಳಿಂದ ಆಗುತ್ತದೆ. ಈ ನೀರಿನ ತುಂತುರುಗಳು ಒಂದು ಅದ್ಭುತ ಶಕ್ತಿಯಿಂದ ಕೂಡಿಕೊಂಡಿರುತ್ತವೆ. ಈ ಶಕ್ತಿ ದ್ರವ ಪದಾರ್ಥಗಳೆಲ್ಲದರ ಮಟ್ಟದ ಮೇಲೆ ಕೆಲಸ ಮಾಡುತ್ತದೆ. ಇದರ ಮಹಿಮೆಯಿಂದ ನೀರಿನ ತುಂತುರುಗಳು ಒಂದಕ್ಕೊಂದು ಕೂಡಿಕೊಂಡಿರುತ್ತವೆ. ಈ ನೀರಿನ ತುಂತುರುಗಳೇ ಒಂದು ಪೊರೆಯಾಗಿ ಏರ್ಪಡುತ್ತವೆ. ಆದುದರಿಂದಲೇ ಗ್ಲಾಸಿನ ತುಂಬಾ ನೀರಿರುವಾಗ ಮೇಲ್ಮಟ್ಟದ ಮೇಲಿರುವ ಪೊರೆ ನೀರನ್ನು ತುಳುಕಗೊಡದು. ಪ್ರತಿಯೊಂದು ದ್ರವ ಪದಾರ್ಥದ ಮೇಲೂ ಇಂತಹ ಪೊರೆಗಳು ಇರುತ್ತವೆ. ಆದರೆ ನೊರೆಗುಳ್ಳೆ ಎಂದರೆ ಬರೀಪೊರೆಯೇ ಹೊರತು ಮತ್ತೇನೂ ಒಳಗೆ ಇರುವುದಿಲ್ಲ! ಒಳಗಿರುವ ಗಾಳಿಯು ಒತ್ತಡದಿಂದ ಈ ಪೊರೆ ಸಾಗುತ್ತದೆ. ಗಾಳಿಯ ಒತ್ತಡ ಎಲ್ಲಕಡೆಯೂ ಇರುವುದರಿಂದ, ಜಲಕಣಗಳು ಒಂದನ್ನೊಂದು ಆಕರ್ಷಿಸುವುದರಿಂದ ಪೊರೆ ಬೆಲೂನಿನಂತೆ ಉಬ್ಬುತ್ತದೆ.



ಆದರೆ ಈ ನೊರೆಗುಳ್ಳೆಗಳು ಬಹು ಹೊತ್ತು ಇರಲಾರವು. ಏಕೆಂದರೆ ಯಾವ ಜಲ ಕಣಗಳ ಕೂಡುವಿಕೆಯಿಂದ ಇದು ತಯಾರಾಗುವುದೋ ಅವು ಭೂಮಿಯ ಆಕರ್ಷಣೆಗೆ ಒಳಗಾಗಿರುತ್ತವೆ. ಭೂಮಿಯ ಆಕರ್ಷಣೆ ಅವುಗಳನ್ನು ಕೆಳಕ್ಕೆ ಎಳೆಯುತ್ತಿರುತ್ತದೆ. ಈ ಆಕರ್ಷಣಶಕ್ತಿ ಬಲವತ್ತರವಾದುದರಿಂದ ನೀರಿನ ಕಣಗಳು ಕೆಳಕ್ಕೆಜಾರಿ, ನೊರೆಗುಳ್ಳೆಯ ಪೊರೆ, ಒಳಗಿರುವ ಗಾಳಿಯ ಒತ್ತಡಕ್ಕೆ ತಡೆಯಲಾರದೆ ಟಪಾಲನೆ ಒಡೆಯುವುದು.




ಪವನಪುರದ ಪ್ರಭುವಾದ ಅವನೀಂದ್ರನು ತುಂಬಿದ ಸಭೆಯಲ್ಲಿರುವಾಗ ರಾಜಭಟರು ಬಡವನೊಬ್ಬನ ಕೈಗಳನ್ನು ಕಟ್ಟಿ ಅವನ ಮುಂದೆ ತಂದು ನಿಲ್ಲಿಸಿದರು.

"ಯಾರಿವನು?" ಎಂದು ಗದರಿಸಿ ಕೇಳಿದ ರಾಜ. "ಜಾಲಗಾರ ಜಾಲಯ್ಯ ಪ್ರಭೂ, ಇಂದು ನಮ್ಮ ಕೈಗೆ ಸಿಕ್ಕಿಬಿದ್ದ" ಎಂದು ಭಟರು ನುಡಿದರು.

"ಮರಣಶಿಕ್ಷೆ ವಿಧಿಸಿದ್ದೇವೆ. ಹುಣಸೇ ಮರದ ಕೊಂಬೆಗೆ ನೇಣು ಹಾಕಿಬಿಡಿ" ಎಂದು ಆಜ್ಞಾಪಿಸಿದ ರಾಜ.

"ಪ್ರಭೂ, ಕೃಪೆ ತೋರಬೇಕು" ಎಂದು ದೈನ್ಯದಿಂದ ಪ್ರಾರ್ಥಿಸಿಕೊಂಡ ಜಾಲಯ್ಯ.

"ತಾವು ಮಹಾ ಪ್ರಭುಗಳಾದುದರಿಂದ ಖಡ್ಗಬಲದಿಂದ ಬದುಕುತ್ತಿರುವಿರಿ, ನಾನು ಸಾಮಾನ್ಯ ಮಾನವನಾದುದರಿಂದ ಯುಕ್ತಿ ಬಲದಿಂದ ಜೀವಿಸುತ್ತಿರುವೆನು. ಯಾವುದೋ ಒಂದು ರೀತಿ ಬದುಕಬೇಕಷ್ಟೆ!" ಎಂದು ವಿನಯವಾಗಿ ನುಡಿದ ಜಾಲಗಾರ ಜಾಲಯ್ಯ.

ರಾಜನು ಜಾಲಯ್ಯನೊಂದಿಗೆ "ನನ್ನ ಖಡ್ಗಕ್ಕೆ ಈ ಲೋಕದಲ್ಲಿ ಎದುರಿಲ್ಲವೇ ಇಲ್ಲ. ಹಾಗಾದರೆ ನಿನ್ನ ಯುಕ್ತಿಬಲಕ್ಕೂ ಎದುರಿಲ್ಲವೇನು?" ಎಂದ.

"ಇಲ್ಲ, ಪ್ರಭೂ ಇಲ್ಲ" ಎಂದ ಜಾಲಯ್ಯ ಸ್ವಲ್ಪವೂ ಸಂಕೋಚಿಸದೆ.

"ಓಹೋ, ಹಾಗೋ? ನಿನ್ನ ಬುದ್ಧಿಶಕ್ತಿಯನ್ನು ಪರೀಕ್ಷೆಮಾಡಲು ಮೂರು ಪ್ರಶ್ನೆಗಳನ್ನು ಹಾಕುವೆನು" ಎಂದ ರಾಜ.

"ಅಗತ್ಯವಾಗಿ ಆಗಬಹುದು ಪ್ರಭೂ! ಬುದ್ಧಿಬಲವಿರುವವನಿಗೆ ಅಸಾಧ್ಯವಾದ ಕೆಲಸವೇ ಇಲ್ಲ" ಎಂದ ನಸುನಗೆಯಿಂದ ಜಾಲಯ್ಯ.

ರಾಜನ ಆಜ್ಞೆಯ ಪ್ರಕಾರ ಜಾಲಯ್ಯನ ಕಟ್ಟು ಬಿಚ್ಚಿದರು. ರಾಜನು ಆತನನ್ನು ಕೋಟೆಯ ಬುರುಜು ಮೇಲೆ ಕರೆದುಕೊಂಡು ಹೋಗಿ ದೂರದಲ್ಲಿ ಹೊಲ ಉಳುತ್ತಿದ್ದ ರೈತನೊಬ್ಬನನ್ನು ತೋರಿಸಿದ. "ಆ ರೈತನಿಗೆ ತಿಳಿಯದಂತೆ ಆತನ ಎರಡು ಎತ್ತುಗಳನ್ನೂ ಅಪಹರಿಸಬೇಕು. ಇದು ಮೊದಲನೇ

ಟಿ. ಸೂರಪ್ಪ, ಶಿವಮೊಗ್ಗ

ಪರೀಕ್ಷೆ'' ಎಂದ. ರಾಜನ ಹತ್ತಿರದಿಂದ ಅಪ್ಪಣೆ ಪಡೆದು ಜಾಲಯ್ಯ ಹೊರಟ. ಹೊಲದ ಪಕ್ಕದಲ್ಲಿದ್ದ ಅಡವಿಯನ್ನು ಸದ್ದಿಲ್ಲದೆ ಪ್ರವೇಶ ಮಾಡಿದ. ಒಂದು ಕಡೆ ಅವಿತಿಟ್ಟುಕೊಂಡು ಹಾಡಲು ಪ್ರಾರಂಭಿಸಿದ. ಆ ಹಾಡು ಕಿವಿಗೆ ಬಿದ್ದಕೂಡಲೇ ಹೊಲ ಉಳುತ್ತಿದ್ದ ರೈತ ಕೆಲಸವನ್ನು ನಿಲ್ಲಿಸಿ, ಆ ಮಧುರಗಾನ ಎಲ್ಲಿಂದ ಬರುತ್ತಿದೆ ಎಂದು ನಾಲ್ಕು ದಿಕ್ಕೂ ನೋಡಿದ. ಯಾರೂ ಕಾಣದಿರಲು ಎತ್ತುಗಳನ್ನು ಅಲ್ಲಿಯೇ ಬಿಟ್ಟು ತನ್ಮಯತೆಯಿಂದ ಅಡವಿಯೊಳಕ್ಕೆ ಪ್ರವೇಶಿಸಿದ.

ಇದೇ ಸಮಯವನ್ನು ಕಾಯುತ್ತಿದ್ದ ಜಾಲಗಾರ ಜಾಲಯ್ಯ ಅಡವಿಯಿಂದ ಹೊರಬಿದ್ದು ಆ ಎತ್ತುಗಳ ಹತ್ತಿರ ಬಂದ. ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಚಾಕು ತೆಗೆದು ಆ ಎತ್ತುಗಳ ಬಾಲ ಮತ್ತು ಕೊಂಬುಗಳನ್ನು ಕೊಯ್ದು, ಅವುಗಳನ್ನು ತುಸ ಹೊರಗೆ ಕಾಣುವಂತೆ ಹೊಲದಲ್ಲಿ ಹೂತಿಟ್ಟ. ಆಮೇಲೆ ಆ ಎತ್ತುಗಳನ್ನು ಅಡವಿಯೊಳಕ್ಕೆ ಓಡಿಸಿದ.

ಇಷ್ಟರಲ್ಲಿ ರೈತ ಅಡವಿಯಿಂದ ಹೊರಗೆ ಬಂದ. ಎಷ್ಟು ಹುಡುಕಾಡಿದರೂ ಹಾಡುತ್ತಿದ್ದ ಮನುಷ್ಯ ಕಾಣಿಸಲಿಲ್ಲ. ಯಾರೋ ದಾರಿತಪ್ಪಿಬಂದ ಗಂಧರ್ವನಿರಬೇಕೆಂದು ಸಮಾಧಾನಮಾಡಿಕೊಂಡ. ಇನ್ನೇನುತಾನೇ ಮಾಡುತ್ತಾನೆ? ನೆಟ್ಟಗೆ ತಾನು ಉಳುತ್ತಿದ್ದ ಹೊಲದಹತ್ತಿರ ಬಂದು ನೋಡಿದರೆ ಎತ್ತುಗಳಿಲ್ಲ! ಆದರೆ ಹೊಲದಲ್ಲಿ ಎತ್ತಿನ ಕೊಂಬುಗಳೂ,ಬಾಲಗಳೂಕಾಣಿಸುತ್ತಿವೆ. ಜಾಲಗಾರ ಜಾಲಯ್ಯ ಅಷ್ಟರಲ್ಲಿ ಅಲ್ಲಿಗೆ ಬಂದ. ಏನೂ ಅರಿಯದವನಂತೆ "ಏನು ವಿಶೇಷ?" ಎಂದು ರೈತನನ್ನು ಕೇಳಿದ. ರೈತ ನಡೆದುದನ್ನೆಲ್ಲಾ ಹೇಳಿದ. ಅದಕ್ಕೆ ಜಾಲಗಾರ ಜಾಲಯ್ಯ "ಒಂದು ವೇಳೆ ಎತ್ತುಗಳು ಭೂಮಿಯೊಳಕ್ಕೆ ಹೂತುಹೋದವೇನೋ? ಬಾಲಹಿಡಿದು ಎಳೆಯಬಾರದೆ?" ಎಂದು ಸಲಹೆಕೊಟ್ಟ.




ಪಾಪ, ಆ ರೈತ ಹೊರಗೆ ಕಾಣಿಸುತ್ತಿದ್ದ ಬಾಲ ಮತ್ತು ಕೊಂಬುಗಳನ್ನು ಹಿಡಿದು ಎಳೆಯಲು ಅವು ಆತನ ಕೈಗೆ ಬಂದವು. ತನ್ನ ಎತ್ತಿನ ಜೊತೆ ಕೆಳಗಿದ್ದ ಯಾವುದೋ ಕೆಸರಿನ ಗುಂಡಿಯಲ್ಲಿ ಹೂತುಹೋಗಿರಬಹು



ದೆಂದು ನೆನೆಸಿದ. 'ಅಯ್ಯೋ ದೇವರೇ' ಎಂದುಕೊಂಡು ಮನೆಗೆ ಹೋದ ಆ ರೈತ.

ಕೋಟೆಯ ಬುರುಜುಮೇಲಿಂದ ಇದೆಲ್ಲವನ್ನೂ ನೋಡುತ್ತಿದ್ದ ರಾಜ ಜಾಲಗಾರ ಜಾಲಯ್ಯನ ಬುದ್ಧಿಬಲಕ್ಕೆ ಮೆಚ್ಚಿಕೊಂಡ. ಸ್ವಲ್ಪ ಹೊತ್ತಿಗೆಲ್ಲಾ ಜಾಲಯ್ಯ ಅಲ್ಲಿಗೆ ಬಂದ.

"ಜಾಲಯ್ಯ, ನಿನ್ನ ಬುದ್ಧಿ ಸಾಮರ್ಥ್ಯ ಮೆಚ್ಚಿಕೊಳ್ಳುವಂತಹದು. ಎರಡನೇ ಪರೀಕ್ಷೆ ಇದು. ಈ ರಾತ್ರಿ ನಮ್ಮ ಅಶ್ವಶಾಲೆಯಲ್ಲಿರುವ ಪಂಚಕಲ್ಯಾಣಿಯನ್ನು ಅಪಹರಿಸಬೇಕು. ತಿಳಿಯಿತೋ?" ಎಂದ ರಾಜ. ಜಾಲಯ್ಯ ನಮಸ್ಕಾರಮಾಡಿ ಹೊರಟುಹೋದ. ರಾಜ ಕೂಡಲೇ ಅಶ್ವಶಾಲೆಗೆ ಹೋಗಿ, ಕಾವಲುಗಾರನನ್ನು ಕರೆದು "ಈವತ್ತು ತುಂಬಾ ಹುಷಾರಾಗಿರಬೇಕು" ಎಂದು ಎಚ್ಚರಿಸಿದ.

ಜಾಲಗಾರಜಾಲಯ್ಯ ನೆಟ್ಟಗೆ ರಾಜಭವನವನ್ನು ಹೊಕ್ಕು ಸೇನಾಧಿಪತಿಯ ಉಡುಪನ್ನು ಅಪಹರಿಸಿದ. ಅವುಗಳನ್ನು ಹಾಕಿಕೊಂಡು ಅರ್ಧರಾತ್ರಿವೇಳೆಗೆ ಅಶ್ವಶಾಲೆಗೆ ಹೋದ. ಅಲ್ಲಿ ಪಹರೆಯವರು ಅತಿಜಾಗ್ರತೆಯಿಂದ ಕಾವಲುಕಾಯುತ್ತಿದ್ದಾರೆ. ಒಬ್ಬ ಸವಾರನಂತೂ ರಾಜನ ಪಂಚಕಲ್ಯಾಣಿಯಮೇಲೇ ಕುಳಿತಿದ್ದಾನೆ!

ಪರಿಸ್ಥಿತಿ ತಿಳಿಯಿತು. ನೆಟ್ಟಗೆ ಕಾವಲುಗಾರರ ಹತ್ತಿರಬಂದ. 'ಕಳ್ಳಸಿಕ್ಕಿಬಿದ್ದ. ನೀವು ತುಂಬಾ ಎಚ್ಚರಿಕೆಯಿಂದ ಕಾವಲು ಕಾಯುತ್ತಿದ್ದುದಕ್ಕೆ ಮಹಾರಾಜರು ಸಂಪ್ರೀತರಾದರು. ತಮ್ಮ ಮೆಚ್ಚಿಕೆ ತೋರಿಸಲು ಅವರು ನಿಮಗಾಗಿ ಈ ಪಾನೀಯವನ್ನು ಬಹುಮಾನವಾಗಿ ಕಳುಹಿಸಿಕೊಟ್ಟಿದ್ದಾರೆ' ಎಂದು ತನ್ನೊಂದಿಗೆ ತಂದಿದ್ದ ಷರಬತ್ತಿನ ಸೀಸೆಗಳನ್ನು ತಲಾ ಒಂದೊಂದರಂತೆ ಹಂಚಿದ. ಜಾಗರಣೆ ತಪ್ಪಿದ್ದೇ ಸಾಕೆಂದುಕೊಂಡಿದ್ದ ಆ ಕಾವಲುಗಾರರಿಗೆ ಈ ಷರಬತ್ತಿನ ಸೀಸೆಗಳು ಕೈಗೆಸಿಕ್ಕಿದ ಕೂಡಲೇ ಬಾಯಿಗೆ ಸುರಿದುಕೊಂಡರು. ಜಾಲಗಾರ ಜಾಲಯ್ಯ ಆ ಷರಬತ್ತಿನಲ್ಲಿ ಮತ್ತುಹಿಡಿಸುವ ಮಾದಕ ಕಲಿಸಿ ತಂದಿದ್ದ. ಭಟರೆಲ್ಲ ಕುಡಿದುಕೆಳಗೆ ಬಿದ್ದಕೂಡಲೇ ರಾಜನ ಕುದುರೆ ಏರಿ ಅಲ್ಲಿಂದ ಹೊರಬಿದ್ದ.



ಸ್ವಲ್ಪ ಹೊತ್ತಾದ ತರುವಾಯ ರಾಜನು ಅಶ್ವಶಾಲೆಗೆ ಬಂದು ನೋಡಿದ. ಕಾವಲು ಗಾರರು ಕುಡಿದು ಕೆಳಗೆಬಿದ್ದಿದ್ದಾರೆ! ಪಂಚ ಕಲ್ಯಾಣಿ ಮಾಯವಾಗಿದೆ !!

ಅಷ್ಟು ಮುಂಜಾಗ್ರತೆ ತೆಗೆದುಕೊಂಡರೂ ಸಹ ಈರೀತಿ ಆಯಿತಲ್ಲಾ ಎಂದು ಯೋಚಿಸುತ್ತಿರಲು ಜಾಲಯ್ಯ ಕುದುರೆ ಮೇಲಿಂದ ರಾಜನ ಕಣ್ಣಮುಂದೆಯೇ ಬಂದು ಇಳಿದ. ರಾಜ ಬೆರಗಾದ.

' ಜಾಲಯ್ಯ, ಕೊನೆಪರೀಕ್ಷೆ ಹೇಳುವೆನು ಕೇಳು. ಮಹಾರಾಣಿಯವರ ಉಂಗುರವನ್ನು ಆಕೆ ಎಚ್ಚರವಾಗಿರುವಾಗ ಅಪಹರಿಸಿದರೆ ನಿನ್ನನ್ನು ಕ್ಷಮಿಸುವೆನು ' ಎಂದ ರಾಜ.

ಈ ರೀತಿ ಹೇಳಿ ನೆಟ್ಟಗೆ ಅಂತಃಪುರಕ್ಕೆ ಹೋಗಿ ರಾಣಿಯ ಪಕ್ಕದಲ್ಲೆ ಕುಳಿತುಕೊಂಡ. ಕಾವಲುಗಾರರಿಗೆ ಎಚ್ಚರಿಕೆಯನ್ನೂ ಕೊಟ್ಟಿದ್ದ.

ಒಂದು ಗಂಟೆಯಾದ ತರುವಾಯ ಹಠಾತ್ತನೆ ಯಾರೋ ಬರುವ ಶಬ್ದವಾಯಿತು. ಮೋಟುಗೋಡೆಯ ಹತ್ತಿರಹೋಗಿ ರಾಜ ಕೆಳಗೆ ಬಗ್ಗಿನೋಡಿದ. ಆ ಮೋಟುಗೋಡೆಗೆ ಒಂದು ಏಣಿ ನಿಲ್ಲಿಸಿತ್ತು. ಆ ಏಣಿಯ ಸಹಾಯದಿಂದ ಯಾರೋ ಮೇಲೆ ಹತ್ತಿ ಬರುತ್ತಿರುವಂತೆ ತೋರಿತು. ಇನ್ನುಯಾರು? ಜಾಲಯ್ಯನೆ ಆಗಿರಬೇಕೆಂದುಕೊಂಡ ರಾಜ. ಕತ್ತಲೆಯಲ್ಲಿ ಆತನಿಗೆ ಸ್ಪಷ್ಟವಾಗಿ ಕಾಣಿಸಲಿಲ್ಲ. ರಾಜನು ಆ ಏಣಿಯನ್ನು ಒಂದು ಕೈಯಲ್ಲಿ




ಹಿಡಿದುಕೊಂಡು ಮತ್ತೊಂದು ಕೈಯಿಂದ ಆ ಮನುಷ್ಯನನ್ನು ತಳ್ಳಿಬಿಟ್ಟ. ರಾಜನು ಹಾಗೆ ತಳ್ಳಿದ್ದು ನಿಜವಾದ ಮನುಷ್ಯನಲ್ಲ. ಜಾಲಯ್ಯ ತನ್ನಹಾಗೆ ಇರುವ ಬಟ್ಟೆಬೊಂಬೆಯನ್ನು ಸಿದ್ಧಪಡಿಸಿ, ಏಣಿಯ ಮೆಟ್ಟಲು ಹತ್ತುತ್ತಿರುವಂತೆ ಬೊಂಬೆಯನ್ನು ಹಗ್ಗದಿಂದ ಎಳೆಯುತ್ತಾ, ತಾನು ಏಣಿಯ ಪಕ್ಕದಲ್ಲಿ ನಿಂತು ತಮಾಷೆ ನೋಡುತ್ತಿದ್ದ!

ಮನುಷ್ಯನೆಂದುಕೊಂಡಿದ್ದ ಆ ಬೊಂಬೆಯನ್ನು ತಳ್ಳಿಬಿಟ್ಟಕೂಡಲೇ ರಾಜನು ಮೆಟ್ಟಲು ಇಳಿದು ಬಂದುಬಿಟ್ಟ. ಇದನ್ನೆಲ್ಲಾ ಜಾಲಯ್ಯ ಗಮನಿಸುತ್ತಲೇ ಇದ್ದ. ರಾಜನು ಅತ್ತಹೋದ ಕೂಡಲೇ ಜಾಲಯ್ಯ ಬೇರೊಂದು ಕಡೆಯಿಂದ ಮೆಟ್ಟಲು ಹತ್ತಿ ರಾಣಿಯ ಅಂತಃಪುರ

ವನ್ನು ಸೇರಿದ. ಒಂದು ಮರೆಯಲ್ಲಿ ಅವಿತು ಕೊಂಡು ಕಂಠ ಬದಲಾಯಿಸಿ "ಪಾಪ, ಅಂದುಕೊಂಡಿದ್ದಂತೆ ಆಯಿತು. ಜಾಲಗಾರ ಜಾಲಯ್ಯ ಏಣಿಯಿಂದ ಕೆಳಗೆ ಬಿದ್ದು ಸತ್ತು ಹೋದ. ಇನ್ನು ನಿನ್ನ ಉಂಗುರಕ್ಕೆ ಭಯ ವಿಲ್ಲ. ಆದರೂ ಇನ್ನೂ ಕೆಲವು ದಿನ ಉಂಗುರ ನಿನ್ನ ಹತ್ತಿರ ಇರುವುದು ಸರಿಯಲ್ಲ. ಇಲ್ಲಿತಾ, ಭದ್ರವಾಗಿಡುತ್ತೇನೆ" ಎಂದ. ನಿದ್ದೆಯ ಮತ್ತಿನಲ್ಲಿದ್ದ ರಾಣಿ, ಈ ಮಾತು ಕೇಳಿದ ಕೂಡಲೇ ತನ್ನ ಉಂಗುರ ತೆಗೆದು ತೆರೆಯ ಮರೆಯಲ್ಲಿದ್ದ ಜಾಲಯ್ಯನ ಕೈಗೆ ಕೊಟ್ಟುಬಿಟ್ಟಳು. ಅದನ್ನು ತೆಗೆದುಕೊಂಡು ಓಟಕಿತ್ತ ಜಾಲಯ್ಯ.

ತುಸ ಸಮಯವಾದಮೇಲೆ ರಾಜನು ಬಂದು ರಾಣಿಯನ್ನು ಎಬ್ಬಿಸಿ "ಪಾಪ ಅಂದುಕೊಂಡಿದ್ದಂತೆ ಆಯಿತು..." ಎಂದು ಏನೋ ಹೇಳಲು ಪ್ರಾರಂಭಿಸಲು, ರಾಣಿ ಕಣ್ಣು ತೆರೆದು "ಅಬ್ಬಾ, ಸದಾ ಅದೇ ಮಾತೇ! ಈಗಲೇ ಅಲ್ಲವೇ ನನ್ನ ಹತ್ತಿರ ಉಂಗುರ ತೆಗೆದುಕೊಂಡು ಹೋದಿರಿ" ಎಂದಳು ಬೇಸರಧ್ವನಿಯಿಂದ.

"ಏನು, ಉಂಗುರವೇ? ಉಂಗುರ!" ಎಂದ ರಾಜ ಬೆರಗಾಗಿ. ಕೂಡಲೇ ಜಾಲಯ್ಯನು ಮಾಡಿದ ಉಪಾಯ ಹೊಳೆಯಿತು.

ಬೆಳಗಾದಕೂಡಲೇ ಜಾಲಯ್ಯ ರಾಣಿಯ ಉಂಗುರದೊಂದಿಗೆ ರಾಜನ ಮುಂದೆ ಪ್ರತ್ಯಕ್ಷನಾದ. ರಾಜನು ನಗುತ್ತಾ "ಜಾಲಯ್ಯಾ, ನಿನ್ನ ಬುದ್ಧಿಬಲಕ್ಕೆ ಸಾಟಿಯಿಲ್ಲವೆಂದು ರುಜುವಾಯಿತು. ನಿನ್ನ ಮರಣಶಿಕ್ಷೆ ರದ್ದುಮಾಡಿದ್ದೇವೆ. ನಿನಗೆ ನೂರು ಎಕರೆ ಹೊಲ ಉಂಬಳಿಯಾಗಿ ಕೊಟ್ಟಿರುತ್ತೇವೆ. ಸುಖವಾಗಿ ಬಾಳು, ಹೋಗು" ಎಂದ.

"ಪ್ರಭುಗಳ ದಯೆ" ಎಂದು ಎರಡು ಕೈಗಳನ್ನೂ ಜೋಡಿಸಿ ರಾಜನಿಗೆ ನಮಸ್ಕಾರ ಮಾಡಿದ ಜಾಲಗಾರ ಜಾಲಯ್ಯ.

ಜಾಲಗಾರ ಜಾಲಯ್ಯ ತನ್ನ ಯುಕ್ತಿಯಿಂದ ಸಂಪಾದಿಸಿದ ನೂರು ಎಕರೆ ಜಮೀನನ್ನು ಇಂದಿಗೂ ಅನುಭವಿಸುತ್ತಾ ಸುಖವಾಗಿದ್ದಾನೆ.



# ನೀನೆಷ್ಟು ವೇಗವಾಗಿ ನಡೆಯಬಲ್ಲೆ?

**ಈ**ಪ್ರಶ್ನೆಗೆ ಉತ್ತರ ಬಹಳ ಸುಲಭವಾಗಿ ಹೇಳಲು ಒಂದು ಮಾರ್ಗವಿದೆ.

ಎಂಬತ್ತು ಅಥವಾ ನೂರು ಗಜ ಉದ್ದವಿರುವ ದಾರ ತೆಗೆದುಕೊ. ಒಂದು ತುಸ ಭಾರವಾದ ಪದಾರ್ಥವನ್ನು ಆ ದಾರದ ಒಂದು ಕೊನೆಗೆ ಕಟ್ಟು.

ಹಾಗೆ ಕಟ್ಟಿದ ಭಾರಕ್ಕೆ 44 ಅಡಿ ದೂರದಲ್ಲಿ ಗುರುತಿಗಾಗಿ ಒಂದು ಗಂಟು ಹಾಕು. ಹಾಗಿಲ್ಲ ಒಂದು ಮಡತೆ ಮಡಚಿದರೂ ಸಾಕು. ಅಲ್ಲಿಂದ ಪ್ರತಿ 44 ಅಡಿ ದೂರಕ್ಕೆ ಮೇಲೆ ಹೇಳಿದಪ್ರಕಾರ ಗುರುತುಮಾಡುತ್ತಾ ಹೋಗು. ಅಂದರೆ ನೂರು ಗಜ ದಾರದ ಪ್ರತಿ 44 ಅಡಿ ದೂರಕ್ಕೆ ಒಂದೊಂದು ಗುರುತು ಇರುವುದೆಂದಾಯಿತು.

ಆತರುವಾಯ ಸೆಕಂಡು ಮುಳ್ಳು ಇರುವ ಗಡಿಯಾರ ತೆಗೆದುಕೊ. ಈಗ ಭಾರ ಕಟ್ಟಿರುವ ಕೊನೆಯನ್ನು ಕೆಳಗಿಟ್ಟು ದಾರವನ್ನು ಕೈಯಲ್ಲಿರಿಸಿಕೊಂಡು ನಡೆಯುತ್ತಾ ಹೋಗು.

ನಿನ್ನ ಕೈಯಲ್ಲಿರುವ ದಾರ ಗಂಟುಗಳು (ಗುರುತುಗಳು) ಒಂದು ಅರ್ಧ ನಿಮಿಷಕ್ಕೆ ಎಷ್ಟು ಸಿಗುವುದೋ ಅಷ್ಟುದೂರ ನೀನು ಒಂದುಗಂಟೆಯಲ್ಲಿ ನಡೆಯಬಲ್ಲೆ ಎಂದು ತಿಳಿಯಬಹುದು.

ಹೇಗೆಂದರೆ:

ಒಂದು ಮೈಲಿಗೆ 5280 ಅಡಿ. ಈ ಸಂಖ್ಯೆಯನ್ನು 44 ರಿಂದ ಭಾಗಿಸಿದರೆ. 120 ಬರುತ್ತದೆ. ಅಂದರೆ 5280 (ಒಂದು ಮೈಲು)ರಲ್ಲಿ 44 ನೂರ ಇಪ್ಪತ್ತನೇ ಒಂದು ಭಾಗವೆಂದಾಯಿತು.

ಅದೇರೀತಿ ಒಂದುಗಂಟೆಗೆ 60 ನಿಮಿಷ. ಇಲ್ಲ 120 ಅರ್ಧ ನಿಮಿಷಗಳು. ಒಂದು ಗಂಟೆಯಲ್ಲಿ ಅರ್ಧನಿಮಿಷ 120 ನೇ ಒಂದು ಭಾಗ. ಆದುದರಿಂದ ಒಂದು ಗಂಟೆಯ ನೂರು ಇಪ್ಪತ್ತನೇ ಒಂದು ಭಾಗದ ವೇಳೆಯಲ್ಲಿ ಒಂದು ಮೈಲಿನ 120 ನೇ ಒಂದು ಭಾಗ ದೂರ ನಡೆಯಬಲ್ಲೆ ಎಂದಾಯಿತು.






ವಿತಂಡ ಅಂತ ಒಬ್ಬ ಬಡವನಿದ್ದ. ಅವನು ತುಂಬಾ ಅಮಾಯಕ. ಆತನು ತನ್ನ ಮೈ ಮುರಿದು ಕಷ್ಟಾರ್ಜನೆಯಿಂದ ತನ್ನ ದೊಡ್ಡ ಸಂಸಾರವನ್ನು ಸಾಗಿಸಬೇಕಾಗಿತ್ತು.

ಬೆಳಗಾದಕೂಡಲೇ ಎದ್ದು ಕೊಡಲಿಯನ್ನು ಹೆಗಲಮೇಲೆ ಹಾಕಿಕೊಂಡು ಅಡವಿಗೆ ಹೋಗುತ್ತಿದ್ದ. ಅಲ್ಲಿ ಸೌದೆ ಕಡಿದು ಅದನ್ನು ತಂದು ನಗರದಲ್ಲಿ ಮಾರಿ, ಆ ಹಣದಿಂದ ಜೀವನ ನಡೆಸುವುದು ಆತನ ದಿನಚರಿ.

ಒಂದು ದಿನ ವಿತಂಡನು ಸೌದೆ ಕಡಿಯುವಾಗ ಆ ದಾರಿಯಲ್ಲಿ ಹೋಗುತ್ತಿದ್ದ ಸಾಧುವೊಬ್ಬನು ಅವನನ್ನು ನೋಡಿದ. ಕಷ್ಟಜೀವಿಯಾದ ವಿತಂಡನನ್ನು ನೋಡಿದಕೂಡಲೇ ಆ ಸಾಧುವಿಗೆ ಕನಿಕರವಾಯಿತು.

ವಿತಂಡನನ್ನು ಕರೆದು "ಅಪ್ಪಾ, ನೀನು ಯಾರು? ನಿನ್ನ ಹೆಸರೇನು?" ಎಂದು ಕೇಳಿದ.

ಅದಕ್ಕೆ ಅವನು ನನ್ನ ಹೆಸರು "ವಿತಂಡ. ಸೌದೆಮಾರಿ ಜೀವಿಸುವುದೇ ನನ್ನ ಕಸಬು" ಎಂದು ಉತ್ತರವಿತ್ತ.

ಸಾಧು ನಗುತ್ತಾ "ವಿತಂಡನೇ! ವಿತಂಡ!! ಭೇಷ್-ಸೊಗುಸಾದ ಹೆಸರು" ಎಂದು ತುಸ ಹೊತ್ತು ಯೋಚಿಸಿದ.

ಕುಶಲಪ್ರಶ್ನೆಗಳಾದಮೇಲೆ "ಅಪ್ಪಾ, ವಿತಂಡ, ಪ್ರಪಂಚವನ್ನು ಮರೆತು, ಸಂಸಾರಕ್ಕಾಗಿ ಇಷ್ಟು ತಾಪತ್ರಯಪಡುತ್ತಿರುವೆ. ಆದರೆ ನೀನು ಎಂದಾದರೂ ದೇವರನ್ನು ಕುರಿತು ಆಲೋಚಿಸಿರುವೆಯೇನು?" ಎಂದು ಪ್ರಶ್ನೆ ಮಾಡಿದ.

"ದೇವರೆ? ಯಾರಾತ? ನನಗೆ ತಿಳಿದ ಬಂಧುಮಿತ್ರರಲ್ಲಿ ಯಾರಿಗೂ ಆ ಹೆಸರಿಲ್ಲವಲ್ಲಾ. ಆದರೂ ಈ ದೊಡ್ಡ ಸಂಸಾರ ತಾಪತ್ರಯದಲ್ಲಿ ಬಿದ್ದು ಒದ್ದಾಡುತ್ತಿರುವ ನನಗೆ ಅವರಿವರನ್ನು ಕುರಿತು ಆಲೋಚಿಸಲು ಸಮಯವಾದರೂ ಎಲ್ಲಿದೆ?" ಎಂದ.

ಈ ಉತ್ತರ ಕೇಳಿ ಸಾಧುವಿಗೆ ತುಂಬಾ ಅಚ್ಚರಿ ಆಯಿತು. ಆದರೂ ಚೇತರಿಸಿಕೊಂಡು "ಎಲವೋ ಅಣ್ಣಾ, ನೀನು ದೇವರ ಹೆಸರೇ ಕೇಳಿಲ್ಲವೆ? ತುಂಬಾ ವಿಚಿತ್ರವಪ್ಪಾ!

ಟಿ. ಸೂರಪ್ಪ, ಶಿವಮೊಗ್ಗ

ನನ್ನನ್ನೂ, ನಿನ್ನನ್ನೂ, ಈ ಮರಗಿಡಗಳನ್ನೂ, ದೂರದಲ್ಲಿ ಕಾಣಿಸುತ್ತಿರುವ ಆ ಪರ್ವತವನ್ನೂ, ಸಮುದ್ರವನ್ನೂ, ನಮ್ಮ ಕಣ್ಣಿಗೆ ಕಾಣುವ ಸಮಸ್ತವಸ್ತುಗಳನ್ನೂ ಸೃಷ್ಟಿಸಿದ ಆ ಮಹಾನುಭಾವನ ಹೆಸರೇ ಕೇಳಿಲ್ಲವೇ? ಅಹ್ಹಹ್ಹಾ," ಎಂದು ಪಕಪಕ ನಕ್ಕನು.

ಈರೀತಿ ಸಾಧು ನುಡಿದು ನಗಲು ಪ್ರಾರಂಭಿಸಲು, ವಿತಂಡನಿಗೆ ತಾನೇನೋ ದೊಡ್ಡ ಅಪರಾಧ ಮಾಡಿದಹಾಗೆ ತೋರಿತು. ಕೂಡಲೇ ಸಾಧುವಿನ ಪಾದಗಳಮೇಲೆ ಬಿದ್ದು ತನಗೆ ಮುಕ್ತಿಮಾರ್ಗ ತೋರುವಂತೆ ಪ್ರಾರ್ಥಿಸಿದ.

ಆಗ ಸಾಧು ವಿತಂಡನ ಕೈಹಿಡಿದು ಎಬ್ಬಿಸಿ "ಅಪ್ಪಾ, ಮಾನವ ಜನ್ಮವೆತ್ತಿದ್ದಕ್ಕೆ ಮೋಕ್ಷ ಪಡೆಯುವುದೇ ಸಾಧಕ. ಅದಕ್ಕಾಗಿ ತಪಸ್ಸನ್ನಾಚರಿಸಬೇಕು. ಹಾಗೆ ಮಾಡಿದ ಹೊರತು ನಾವು ಸತ್ತಮೇಲೆ ಮತ್ತೆ ನಾಯಿಯಾಗಿಯೋ ನರಿಯಾಗಿಯೋ ಜೀವಿಸಬೇಕಾಗುತ್ತದೆ" ಎಂದು ತಿಳಿಯ ಹೇಳಿದ.

ವಿತಂಡ ಕಳವಳಗೊಂಡ. ಈ ದೇವರ ಗೊಡವೆಯಿಂದ ಆತನ ಮನಸ್ಸಿನಲ್ಲಿ ತಳಮಳ ಪ್ರಾರಂಭವಾಯಿತು. ಸಾಧು ಆತನಿಗೆ ಆಶೀರ್ವಾದಮಾಡಿ ಹೊರಟುಬಿಟ್ಟ.

ವಿತಂಡ ಸೌದೆಯ ಹೊರೆಯನ್ನು ಹೊತ್ತುಕೊಂಡು ಚಿಂತೆ ತುಂಬಿದ ಭಾರವಾದ ಹೃದಯದಿಂದ ಕಾಲೆಳೆದುಕೊಂಡು ನಗರಕ್ಕೆ ಹೊರಟ. ಪರಧ್ಯಾನದಿಂದಲೇ ವ್ಯಾಪಾರ ಮಾಡಿದ. ಅಂದು ಸೌದೆ ಮಾರಿ ಬಂದ ಹಣ




ವನ್ನು ಹೆಂಡತಿಯ ಕೈಗೆ ಒಪ್ಪಿಸಿ, ವಿತಂಡನು ದೇವರ ಧ್ಯಾನದಲ್ಲಿ ಮುಳುಗಿದ.

ಗಂಡನಲ್ಲುಂಟಾದ ಬದಲಾವಣೆ ಕಂಡು ಆತನ ಹೆಂಡತಿಗೆ ಆಶ್ಚರ್ಯ ವಾಯಿತು. ಮಾರನೆಯ ದಿನ ಅಡವಿಗೆ ಹೋಗದೆ, ದೇವರ ಪ್ರಾರ್ಥನೆಯಲ್ಲೇ ಮುಳುಗಿದ್ದ. ಇದನ್ನು ನೋಡಿ ಆಕೆಗೆ ವಿಪರೀತ ಕೋಪ ಬಂತು.

"ವೇಳೆ ಆಯಿತು. ಕೊಡಲಿ ತೆಗೆದುಕೊಂಡು ಅಡವಿಗೆ ಹೋಗಿ" ಎಂದಳು.

"ಊಹುಂ. ನಾನು ಹೋಗುವುದಿಲ್ಲ. ನನ್ನ ಆತ್ಮದ ಗತಿ ಏನಾಗಬೇಕು. ನಾನು ಅಡವಿಗೆ ಹೋದರೆ ದೇವರಸಂಗತಿ ಏನು?" ಎಂದು ಹೇಳಿ ಸಾಧುವಿನ ಮಾತಿನಂತೆ ನಡೆಯಲು ನಿಶ್ಚಯಿಸಿದ. ಆತನ ಹೆಂಡತಿ ಆಗ ಸುಮ್ಮನಿದ್ದಳು.




ಒಂದೆರಡು ದಿನ ಕಳೆಯಿತು. ಆದರೆ ವಿತಂಡನು ಸದಾ ದೇವರ ಧ್ಯಾನದಲ್ಲೇಕಾಲ ಕಳೆಯುತ್ತಿದ್ದ. ಮನೆಯಲ್ಲಿ ಕಾಳಿಲ್ಲ. ಮಕ್ಕಳು ಹಸಿವಿನಿಂದ ಒದ್ದಾಡುತ್ತಿವೆ. ಗಂಡನಘೋರಣೆ ಇನ್ನು ಸಹಿಸಲಾಗಲಿಲ್ಲ. ಬಾಯಿಗೆ ಬಂದಂತೆ ಬಯ್ಯಲು ಮೊದಲು ಮಾಡಿದಳು ವಿತಂಡನ ಮಡದಿ.

"ಚೆ, ದೇವರ ಪ್ರಾರ್ಥನೆಗೂ ಅವಕಾಶ ವಿಲ್ಲ ಈ ಹಾಳು ಕೊಂಪೆಯಲ್ಲಿ. ಏಕಿರಬೇಕು ಇಲ್ಲಿ?" ಎಂದು ಯೋಚಿಸಿದ. ವಿರಕ್ತಿ ಹೊಂದಿ ನೆಟ್ಟಗೆ ಹತ್ತಿರದಲ್ಲೇ ಇರುವ ಬೆಟ್ಟದ ಕಡೆಗೆ ಹೋದ.

ಮಂತ್ರ ಪರ್ವತವೆಂಬ ಬೆಟ್ಟದ ಸಾಲು ಅಲ್ಲಿಗೆ ಹತ್ತಿರದಲ್ಲಿತ್ತು. ರಾತ್ರಿಯಲ್ಲಿ ಮಾತ್ರ ವಲ್ಲ. ಹಗಲಲ್ಲೂ ಸಹ ಆ ಬೆಟ್ಟದ ಮೇಲೆ ಯಾರೂ ಹೋಗುತ್ತಿರಲಿಲ್ಲ. ಕಾರಣ ಅಲ್ಲಿ ದೆವ್ವಗಳೂ, ಗಂಧರ್ವರೂ ಓಡಾಡುವರೆಂದು ಜನರಲ್ಲಿ ನಂಬಿಕೆ.

ದೇವರ ಪ್ರಾರ್ಥನೆಯಲ್ಲಿ ಮೈಮರತಿದ್ದ ವಿತಂಡ ನೆಟ್ಟಗೆ ಆ ಪರ್ವತವನ್ನು ಹತ್ತಿದ. ಒಂದು ಕಡೆ ಒಂದೆರಡು ಮರಗಳಿದ್ದುವು. ಆ ಪ್ರದೇಶ ತುಸ ಕತ್ತಲಾಗಿಯೂ ಇತ್ತು.

ವಿತಂಡನು ಆ ಸ್ಥಳವನ್ನು ಆರಿಸಿಕೊಂಡು ಅಲ್ಲಿ ಕುಳಿತುಕೊಂಡ. ಮತ್ತೆ ಕೊಂಚ ಸಮಯಕ್ಕೆಲ್ಲಾ ಅವನು ದೇವರ ಧ್ಯಾನದಲ್ಲಿ ಲೀನವಾದ.

ಹಾಗೆ ಎಷ್ಟುಕಾಲ ಕಳೆಯಿತೋ ಹೇಳ ಲಾರೆವು. ಒಂದು ದಿನ ದೇವರ ಧ್ಯಾನದಲ್ಲಿ ಕುಳಿತಿದ್ದ ವಿತಂಡನ ಹತ್ತಿರದಲ್ಲೇ ಯಾವುದೋ ಒಂದು ಶಬ್ದ ಕೇಳಿಸಿದಂತಾಯಿತು. ಆತನು ಅಡ್ಡವಾಗಿ ಬೆಳೆದಿದ್ದ ಮರದ ಕೊಂಬೆಯನ್ನು ಸ್ವಲ್ಪ ಸರಿಸಿನೋಡಿದ.

ಮಿಣಮಿಣಸುವ ವಸ್ತ್ರಾಭರಣಗಳಿಂದಲೂ ನಿಗನಿಗಿಸುವ ಶರೀರ ಕಾಂತಿಯಿಂದಲೂ ಇದ್ದು ಈರ್ವರು ಕನ್ಯೆಯರು ಕುಳಿತುಕೊಂಡು ಪಚ್ಚೀಸು ಆಡುತ್ತಿದ್ದಾರೆ. ಅವರ ಆಟ ನೋಡುತ್ತಿದ್ದ ವಿತಂಡ.

ಎಲ್ಲವನ್ನೂ ಮರೆತು ಪಚ್ಚೀಸು ಆಡುತ್ತಿದ್ದ ಆ ಯುವತಿಯರು ಯಾರು? ಏನು? ಎಂಬ ವಿಷಯದಕಡೆ ವಿತಂಡನ ಗಮನ ಹೋಗಲಿಲ್ಲ. ಆತನ ಮನವೆಲ್ಲಾ ಆಟದಮೇಲೆ ಕೇಂದ್ರೀ

ಕೃತವಾಗಿದೆ. ಆತನೂಸಹ ಆಟದಲ್ಲಿ ತನಗೆ ಗೊತ್ತಿಲ್ಲದೆಯೇ ಪಾಲುಗೊಳ್ಳ ಲಾರಂಭಿಸಿದ.

ಆಟ ಒಳ್ಳೆ ರಕ್ತಿಕಟ್ಟಿತ್ತು. ಆ ಕನ್ಯೆಯರು ದಾಳಗಳನ್ನು ಕುಲುಕಿ ಕುಲುಕಿ ಹಾಕಿ, ಕವಡೆಯನ್ನು ಕದಲಿಸುತ್ತಿದ್ದರು. ಪ್ರತಿ ಚಲನೆಯನ್ನೂ ಸೂಕ್ಷ್ಮವಾಗಿ ನೋಡುತ್ತಿದ್ದಾನೆ ವಿತಂಡ.

ಅವರಲ್ಲೊಬ್ಬಾಕೆ ಪರಧ್ಯಾನದಲ್ಲಿ ಒಂದು ಕವಡೆಯನ್ನು ಕದಲಿಸುವುದ ರಲ್ಲಿದ್ದಳು. ಆ ಕಾಯಿ ಹಾಗೆ ನಡೆಸುವುದು ತಪ್ಪು ಅಂತ ಗೊತ್ತು ವಿತಂಡನಿಗೆ.

'ತಾಯಿ, ಅದು ತಪ್ಪು. ಆ ಕವಡೆಯನ್ನು ಕದಲಿಸಬೇಡ' ಎಂದು ಅಪ್ರಯತ್ನವಾಗಿ ಆತನ ಬಾಯಿಂದ ಮಾತು ಹೊರಬಿತ್ತು.

ಆ ಕನ್ಯೆಯರಿಬ್ಬರೂ ಭಯಕಂಪಿತರಾಗಿ ವಿತಂಡನಕಡೆ ನೋಡಿದರು. ಮರುಕ್ಷಣವೇ ಜಿಂಕೆಗಳಾಗಿ ರೂಪಾಂತರ ಹೊಂದಿ ಚಂಗನೆ ಓಡಿಹೋದರು.

ಈ ದೃಶ್ಯನೋಡಿ ವಿತಂಡನಿಗೆ ಕನಸಿನಿಂದ ಎಚ್ಚರವಾದಂತೆ ತೋರಿತು. ಮನೆ ಮತ್ತು ಮಡದಿಮಕ್ಕಳ ಜ್ಞಾಪಕಬಂತು. ಒಂದುಸಾರಿ ಅವರನ್ನು ನೋಡಿಕೊಂಡು ಬರೋಣವೆಂದು ಅಲ್ಲಿಂದ ಹೊರಟ. ಸ್ವಲ್ಪ ಸಮಯಕ್ಕೆಲ್ಲಾ ಬೆಟ್ಟದ ತಪ್ಪಲಿಗೆಬಂದ.

ದಾಹವಾಯಿತು. ಅಲ್ಲೊಂದು ಸಣ್ಣ ಕೊಳದ ಹತ್ತಿರ ಹೋಗಿ ನೀರು ಕುಡಿಯಲು ಸಿದ್ಧವಾಗುತ್ತಿರುವಲ್ಲಿ ಆತನಿಗೆ ನೀರಿನಲ್ಲಿ ಒಬ್ಬ




ವೃದ್ಧನ ಸ್ವರೂಪ ಕಾಣಿಸಿತು. ವಿತಂಡನಿಗೆ ಭಯವಾಯಿತು.

"ಎಲ್ಲಾ ಮಾಯ. ಅಸಲು ಈ ಪರ್ವತಗಳೇ ಮಾಯ" ಎಂದುಕೊಂಡ ವಿತಂಡ. ತನ್ನ ದಾಹವನ್ನು ತೀರಿಸಿಕೊಳ್ಳಲು ಹಿಂದೆ ತಾನು ಇದ್ದ ಮನೆಯ ಕಡೆ ಬಂದ.

ಆದರೆ ಅಲ್ಲಿ ಆತನ ಮನೆಯ ಗುರುತೇ ಸಿಕ್ಕಲೊಲ್ಲದು! ತನ್ನ ಸಂಸಾರ ಏನಾಯಿತು ಎಂದು ಆಲೋಚನೆಯಲ್ಲಿ ಮುಳುಗಿದ.

ಅಷ್ಟರಲ್ಲಿ ಒಬ್ಬಯುವತಿ ಗಡಿಗೆಯನ್ನು ಸೊಂಟದಲ್ಲಿರಿಸಿ ಕೊಂಡು ಹೊಳೆಯಿಂದ ಆ ಮಾರ್ಗವಾಗಿ ಬರುವುದು ಕಾಣಿಸಿತು. "ತಾಯಿ, ಇಲ್ಲಿ ವಿತಂಡನೆಂಬ ಕೆಟ್ಟಿಗೆ ಮಾರುವವನ ಹೆಂಡತಿ ಮಕ್ಕಳು ಇದ್ದರಲ್ಲಾ,

ಅವರ ವಿಷಯ ನಿನಗೇನಾದರೂ ತಿಳಿದಿದೆಯೆ?" ಎಂದ. ಆಕೆ ವಿತಂಡನ ಕಡೆ ಆಶ್ಚರ್ಯದಿಂದ ನೋಡಿದಳು. ಆ ತರುವಾಯ ನಗುತ್ತಾ ಹೀಗೆಂದಳು:

"ಅಜ್ಜಾ, ಈ ಪ್ರಾಂತದಲ್ಲಿ ಮೂರು ತಲೆಮಾರಿನ ಕೆಳಗೆ ವಿತಂಡನೆಂಬ ಕಟ್ಟಿಗೆಯವನಿದ್ದನೆಂದೂ, ಆತನಿಗೆ ಸಂಸಾರದಲ್ಲಿ ವಿರಕ್ತಿಯುಂಟಾಗಿ ಮಂತ್ರ ಪರ್ವತಕ್ಕೆ ಹೋದನೆಂದೂ, ನಮ್ಮ ಮುತ್ತಜ್ಜಿ ಹೇಳುತ್ತಿದ್ದಳು. ಅದರ ಹೊರತು ಬೇರೇನೂ ವಿಷಯ ನನಗೆ ತಿಳಿಯದು" ಎಂದಳು.

ಆ ಮಾತು ಕೇಳಿ ವಿತಂಡನಿಗೆ ಎಲ್ಲಾ ಅರ್ಥವಾಯಿತು. ಒಂದುಸಾರಿ ತನ್ನ ಶರೀರದ ಕಡೆ ನೋಡಿಕೊಂಡ. ಸುಕ್ಕುಸುಕ್ಕಾಗಿದೆ ದೇಹ. ನೀಳವಾಗಿ ಬೆಳೆದಿದೆ ಬಿಳಿಗಡ್ಡ. ಅಂದು ಕೊಳದಲ್ಲಿ ಕಾಣಿಸಿದ ವೃದ್ಧನ ರೂಪವೇ ತನ್ನ ಪ್ರತಿಬಿಂಬವೆಂದು ಅರಿತ. ಶರೀರದಲ್ಲಿ ಪಟುತ್ವ ಮಾಯವಾಗಿದೆ. ಆಯಾಸದಿಂದ ಒಂದು ಮರದಡಿ ಕುಳಿತುಕೊಂಡ.

ಆತನ ಕಡೆ ಕರುಣಾಪೂರಿತಳಾಗಿ ನೋಡಿದಳು ಆ ಯುವತಿ. ಹಾಗೇ ನೋಡಿ ಆಕೆ ಮುಂದಕ್ಕೆ ನಡೆಯಲು ಅನುವಾದಳು. ನಿಲ್ಲುವಂತೆ ಸಂಜ್ಞೆ ಮಾಡಿದ ವಿತಂಡ.

ಆಕೆ ನಿಂತಳು. ಆಗ ಆತನು "ನನ್ನ ಮಾತೊಂದು ಇದೆ. ಅದನ್ನು ಈ ಗ್ರಾಮದಲ್ಲಿ ಮಾತ್ರವಲ್ಲದೆ ಎಲ್ಲೆಡೆಯೂ ಹರಡುವಂತೆ ಮಾಡಬೇಕು" ಎಂದ.

"ಏನದು?" ಕೌತುಕದಿಂದ ನುಡಿದಳು ಆ ಯುವತಿ. ಅದಕ್ಕೆ ವಿತಂಡನು "ದೇವರ ಧ್ಯಾನದಲ್ಲಿ ಮುಳುಗಿ ಪತ್ನಿ ಪುತ್ರರನ್ನೂ ಸಂಸಾರವನ್ನೂ ಮರೆಯಕೂಡದು. ಇದು ಮಹಾಪಾಪ. ಅಂತಹ ಜನ ಮುಂದಿನ ಜನ್ಮದಲ್ಲಿ ನಾಯಿಯಾಗಿಯೋ, ಕಾಗೆಯಾಗಿಯೋ ಜನಿಸುವರು. ಇದೇ ನನ್ನ ಮಾತು" ಎಂದು ಆ ಮರದ ಬುಡದಲ್ಲೇ ಪ್ರಾಣಬಿಟ್ಟ.

ಈ ಸುದ್ದಿ ಗ್ರಾಮದಲ್ಲೆಲ್ಲಾ ಹರಡಿತು. ತಂಡೋಪ ತಂಡವಾಗಿ ಜನ ಬಂದು ವಿತಂಡನ ವಿಚಿತ್ರ ಚರಿತ್ರೆಯನ್ನು ತಿಳಿದುಕೊಂಡರು.



## ಉ ತ್ತ ರ ಹೇ ಳು

1. ಪ್ರಪಂಚದಲ್ಲೆಲ್ಲಾ ದೊಡ್ಡ ರತ್ನ ಯಾವುದು?
   ಕಲಿನಾನ್
   ಕೋಹಿನೂರ್
   ನಿಜಾಂ
2. ಇಂಡಿಯಾದೇಶದಲ್ಲಿ ಅತಿದೊಡ್ಡ ಸಿಂಹದ್ವಾರ ವೆಲ್ಲಿದೆ?
   ಡಿಲ್ಲಿ
   ಆಗ್ರಾ
   ಫತೇಪುರ್ ಸಿಕ್ರಿ
3. ಎಲ್ಲಕ್ಕಿಂತಲೂ ದೊಡ್ಡ ಮ್ಯೂಜಿಯಂ ಎಲ್ಲಿದೆ?
   ಮಾಸ್ಕೋ
   ಲಂಡನ್
   ನ್ಯೂಯಾರ್ಕ್
4. ಆದಿ ಪುರಾಣವನ್ನು ಯಾರು ಬರೆದರು?
   ಪಂಪ
   ಕಾಳಿದಾಸ
   ಬಾಣ
5. ಎಲ್ಲಕ್ಕಿಂತಲೂ ಎತ್ತರವಾದ ಪಟ್ಟಣ ಎಲ್ಲಿದೆ?
   ಚೈನಾ
   ಅಮೇರಿಕಾ
   ಟಿಬೆಟ್
6. ಟೆಲಿವಿಜನ್ ಕಂಡುಹಿಡಿದವರು ಯಾರು?
   ಎಡಿಸನ್
   ಬೇರ್ಡ್
   ಬನ್ಸೆನ್

## ಚು ಟ ಕ

ದೋಸೆ ಹೊತ್ತುಕೊಂಡು ನಾರಿ
ನಡೆಸುತಿರಲು ದಾರಿ,
ಹದ್ದು ಎರಗಿ ದೋಸೆ ಕಚ್ಚಿ
ಕೊಂಡು ಹೋಯ್ತು ಹಾರಿ!

## ವಿ ನೋ ದ

ಉಪಾಧ್ಯಾಯಿನಿ ಒಬ್ಬ ಹುಡುಗನ ಪ್ರಬಂಧದ ತುಂಬಾ ದೊಡ್ಡ ದೊಡ್ಡ ಶಬ್ದಗಳಿರುವುದನ್ನು ನೋಡಿ "ಈ ಪ್ರಬಂಧ ನೀನು ಸ್ವಂತವಾಗಿ ಬರೆದೆಯಾ?" ಎಂದು ಹುಡುಗನನ್ನು ಕೇಳಿದಳು. ಅದಕ್ಕೆ ಆ ಹುಡುಗ ತುಸಹೊತ್ತು ಯೋಚಿಸಿ "ಹಾಗೆಹೇಳಲು ಸಾಧ್ಯವಿಲ್ಲ. ಇದರಲ್ಲಿ ಪ್ರಯೋಗಿಸಿದ ಕೆಲವುಪದಗಳು ನಿಮಗೆ ನಿಘಂಟಿನಲ್ಲೂ ಸಹ ಸಿಗುತ್ತದೆ" ಎಂದ.



ಒಬ್ಬ ಹುಡುಗ ತುಂಬಾ ಬೇಜಾರುಮಾಡಿಸಲು ಮಾಸ್ತರರು ಕೋಪದಿಂದ "ನಾನಿಲ್ಲದಿದ್ದರೆ ಈ ನಗರದಲ್ಲಿ ವಿದ್ಯೆ ಬಾರದ ಕತ್ತೆಗಳಲ್ಲಿ ನಿನ್ನನ್ನು ವಿಚಾರಿಸಿದವರಿರುತ್ತಿರಲಿಲ್ಲ" ಎಂದು ಹೇಳಿದರಂತೆ!



"ಡಾಕ್ಟ್ರೇ ನನ್ನ ಖಾಯಿಲೇ ವಾಸಿಯಾಗುವುದೇ?" ಎಂದು ಕೇಳಿದ ರೋಗಿ.
"ನೂರಕ್ಕೆ ನೂರುಪಾಲು ಗುಣವಾಗಬಹುದು. ಈ ರೋಗದಿಂದ ನೂರಕ್ಕೆ ತೊಂಬತ್ತು ಜನ ಸಾಯುವರೆಂದು ಪುಸ್ತಕದಲ್ಲಿದೆ. ನನ್ನಹತ್ತಿರ ಈ ಕೇಸಿನ 9 ಜನ ಬಂದು ಸತ್ತುಹೋದರು. ನೀನು ಹತ್ತನೇಯವನು. ಆದ್ದರಿಂದ ತಪ್ಪದೆ ಗುಣವಾಗುವುದು" ಎಂದ ಡಾಕ್ಟರು.



ಕಮಲ ತನ್ನ ಇಬ್ಬರು ಮೂವರು ಗೆಳತಿಯರೊಂದಿಗೆ ಆಡಿಕೊಳ್ಳುತ್ತಿದ್ದಳು. ಇಷ್ಟರಲ್ಲಿ ಕಾಮವ್ವ ಕೂಡಾ ಆಡಿಕೊಳ್ಳಲು ಬಂದಳು ಇದು ಕಮಲೆಗೆ ಇಷ್ಟವಿಲ್ಲ. ಆದುದರಿಂದ "ಕಾಮವ್ವ ನೀನು ದಾಸಿಯುವಳು. ನಿನಗಿಂದು ರಜಾಕೊಟ್ಟದ್ದೇನೆ. ನೀನು ಮನೆಗೆ ಹೋಗಬಹುದು" ಎಂದು ನುಡಿದಳು ಕಿಲಾಡಿ ಕಮಲೆ.

# ಮಾತೆಯ ಕರೆ

ಬನ್ನಿರೆಲ್ಲರು ಭಾರತೀಯರೆ
ಕಷ್ಟಪಟ್ಟು ದುಡಿಯಿರಿ!
ನನ್ನಿಯಿಂದಲಿ ಕೆಲಸ ಮಾಡುತ
ಸುಖವ ದೇಶಕೆ ತನ್ನಿರಿ!
ಗಾಂಧಿ ತೋರಿದಪಥದಿ ಮುಂದಕೆ
ಹೆಜ್ಜೆಯಿಟ್ಟು ನಡೆಯಿರಿ!
ಅಂದಿನವನಾ ಆಸೆಯನ್ನು
ಪೂರ್ತಿಗೊಳಿಸ ಲೆಳಸಿರಿ!
ಜಾತೀಯತೆಯನು ತ್ಯಜಿಸಿ ನೀವು
ಒಂದೇ ಮನದಲಿ ಸಾಗಿರಿ!

ನೀತಿ ಮಾರ್ಗವ ಬಿಡದೆ ಎಲ್ಲರು
ದೇಶಕಾಗಿಯೆ ದಣಿಯಿರಿ!
ಹೆಚ್ಚು ಕೃಷಿಯನು ಮಾಡಿ ಜನರೇ
ಸ್ವಾವಲಂಬಿಗಳಾಗಿರಿ!
ಅಚ್ಚು ಮೆಚ್ಚಿನ ಬುದ್ಧದೇವನ
ತತ್ವವನ್ನು ಬಿಡದಿರಿ!
ಪಾರತಂತ್ರ್ಯದಿಂ ಮುಕ್ತಿಗೊಂಡಿಹ
ಮಾತೆಯನ್ನು ಪೊರೆಯಿರಿ!
ಧೀರ ತನದಲಿ ಮುಂದೆ ನಡೆಯುತ
ವೀರಶೂರರಾಗಿರಿ!

ನರಸಿಂಹಶಾಸ್ತ್ರಿ, ಪಡಾರು




ಮಕ್ಕಳೇ! ಈ ನಾಯಿಯನ್ನು ನೋಡಿ. ಯಾರಿಗಾಗಿಯೋ ಕಾದಿರುವಂತೆ ತೋರುವುದಷ್ಟೆ. ನಿಜ. ಅಲ್ಲೇ ಒಂದು ಬುಟ್ಟಿ ಇದೆ ನೋಡಿದಿರಾ? ಆ ಬುಟ್ಟಿಯ ಒಡೆಯನೇನಾದನೋ ತಿಳಿಯುತ್ತಿಲ್ಲ. ಬುಟ್ಟಿಯಲ್ಲಿ ತಿಂಡಿಯಿದೆ. ಅದನ್ನು ನೋಡಿ ನಾಯಿಯ ಬಾಯಲ್ಲಿ ನೀರೂರುತ್ತಿದೆ. ಎಲ್ಲಿ ಯಜಮಾನ ಬಂದುಬಿಡುವನೋ ಎಂಬ ಭಯ. ಯಜಮಾನ ಇರುವ ಸ್ಥಳ ತೋರಿಸಿ ನಾಯಿಗೆ ಎಚ್ಚರಿಕೆಕೊಡುವಿರಾ?

# ಹಿಂಬದಿಯ ಚಿತ್ರ

ವೈಶಾಖ ಪೂರ್ಣಿಮಾ ಬುದ್ಧ ಭಗವಾನ್ ಅವತರಿಸಿದ ಪುಣ್ಯ ದಿನ. ಬುದ್ಧಾವತಾರವು ನಮ್ಮ ದೇಶದಲ್ಲೇ ಆಗಿದ್ದರೂ ಬೌದ್ಧಮತದ ಪ್ರಚಾರವು ಇತರ ದೇಶಗಳಲ್ಲೇ ಹೆಚ್ಚು. ಇದರಲ್ಲಿ ನಮ್ಮ ನೆರೆಯ ಚೀನಾದೇಶವು ಮುಖ್ಯವಾದುದು.

ಚೀನಾ ಬಹುದೊಡ್ಡ ಪ್ರಾಚೀನವಾದ ದೇಶ. ಪ್ರಪಂಚದಲ್ಲಿ ಅನೇಕ ದೇಶಗಳು ತಿಂಡಿ ಬಟ್ಟೆಗಳನ್ನು ತಿಳಿದುಕೊಳ್ಳದಿದ್ದ ಆದಿಕಾಲದಲ್ಲಿಯೇ 'ಬ್ರಹ್ಮಾಂಡವಾದ ಚೀನಾ ಗೋಡೆ' (ದಿ ಗ್ರೇಟ್ ವಾಲ್ ಆಫ್ ಚೈನಾ) ಯನ್ನು ನಿರ್ಮಿಸಿಕೊಂಡು ತನ್ನ ರಕ್ಷಣೆ ಮಾಡಿಕೊಂಡಿದ್ದ ನವನಾಗರಿಕ ದೇಶವದು. 'ಪ್ರಪಂಚದ ಏಳು ಅದ್ಭುತ' ಗಳಲ್ಲಿ ಇದೊಂದು. ನಮಗೆ ಸಕ್ಕರೆಯನ್ನೂ, ದೀಪಾವಳಿ ಹಬ್ಬಕ್ಕೆ ಪಟಾಕಿ ಮದ್ದು ಬಾಣಬತ್ತಿಗಳನ್ನೂ ಕಳುಹಿಸುವವರು ಚೈನೀಯರೇ. ಆಕರ್ಷಣೀಯವಾದ ಶಿಲ್ಪಕಳೆಗಳಿಂದೊಪ್ಪುವ ಚೀನಾ ಪಾತ್ರೆಗಳೂ, ಕಾಗದದ ಹಾಳೆಗಳೂ ಪ್ರಪಂಚ ವಿಖ್ಯಾತಿ ಪಡೆದಿವೆ. ಗಾರುಡೀ ವಿದ್ಯೆಗಳಲ್ಲಿಯೂ ಚೈನೀಯರು ಗಟ್ಟಿಗರು. ಪಟ್ಟೆಯ ಉದ್ಯಮ ಕೂಡಾ ಚೀನಾದವರ ಸೊತ್ತೇ. ಅಲ್ಲಿ 'ಕಾರ್ಮೊರೆಂಟ್' ಎಂಬ ಒಂದು ಜಾತಿಯ ಮೀನುಗಳನ್ನು ಹಿಡಿದು ತರುವ ನೀರು ಕಾಗೆ ಇದೆ. ಚೈನೀಯರು ಅದರ ಕೊರಳಿಗೆ ಒಂದು ವಿಧವಾದ 'ರಿಂಗು' ಹಾಕುತ್ತಾರೆ. ಆದ್ದರಿಂದ ಅದು ಮೀನುಗಳನ್ನು ಹಿಡಿದು ತರಬಲ್ಲುದೇ ಹೊರತು ತಿನ್ನಲಾರದು!

ಚೀನಾದೇಶೀಯರು ಗಜನಿಂಬೆಯಂತಹ ಹಚ್ಚಹಳದಿ ಬಣ್ಣದವರು. ಸಣ್ಣ ಸಣ್ಣ ಪಾದಗಳೂ ಇಲಿಬಾಲದಂತಹ ಜಡೆಗಳೂ ಇರುತ್ತವೆ. ಅವರು ಕಷ್ಟಜೀವಿಗಳು. ತಾಳ್ಮೆ, ಭಕ್ತಿ, ಮಿತವ್ಯಯ, ಸಾವಿಗೆ ಹೆದರದ ಧೈರ್ಯ, ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಳ್ಳುವಿಕೆ ಮುಂತಾದ ಗುಣಗಣಗಳು ಚೈನೀಯರಲ್ಲಿವೆ. ನಮ್ಮ ದೇಶದಂತೆಯೇ ಅಲ್ಲಿಯೂ ಜನಸಂಖ್ಯೆ ಹೆಚ್ಚು. ಆದ್ದರಿಂದಲೇ ಅವರು ಕಾಲುವೆಗಳಲ್ಲಿ ದೋಣಿಗಳನ್ನೆ ಮನೆಯಾಗಿ ಮಾಡಿಕೊಂಡು, ಅಲ್ಲಿಯೇ ತಮ್ಮ ಬಾಳುವೆಯನ್ನೆಲ್ಲಾ ಕಳೆಯುತ್ತಾರೆ. ಚೀನಾ ಭಾಷೆ ಸಣ್ಣ ಸಣ್ಣ ಪದಗಳಿಂದ ಕೂಡಿರುತ್ತದೆ. ಒಂದೊಂದು ಶಬ್ದ ಒಂದೊಂದು ಭಾವವನ್ನು ತಿಳಿಸುತ್ತದೆ. ಕಾಗದ, ಮುದ್ರಣ ಯಂತ್ರ, ತುಪಾಕಿ ಮದ್ದು, ಉತ್ತರ ಮುಖಿ—ಇವನ್ನೆಲ್ಲಾ ಮೊದಲು ಕಂಡು ಹಿಡಿದವರು ಚೈನೀಯರೇ. ಅಂತಹ ಚೀನಾ ಬಾಲಕನೊಬ್ಬ 'ಹಿಂಬದಿಯ ಚಿತ್ರ'ದಲ್ಲಿ ಆ ಮುದುಕಿಯ ಮಡಿಲ ಮೇಲೆ ಕುಳಿತಿದ್ದಾನೆ.

## ಟೈಪ್‌ರೈಟಿಂಗ್ ಚಿತ್ರ



ಎಸ್. ವೆಂಕಟೇಶಮೂರ್ತಿ, ಹಾಸನ

## ರೇಖಾ ಚಿತ್ರ



ಉದಯಶಂಕರ್, ಪ್ರಯಾಗ (ವಯಸ್ಸು ೧೧)

## ಕಂದನ ಪ್ರಾಸ

1. ನಮ್ಮ ಮನೆಯ ಕಂದ
ನೋಡಲು ಬಹಳ......
2. ಉಂಗುರ ಧರಿಸಲು ಬೆರಳು,
ಸರವನು ಹಾಕಲು......
3. ಮಾತು ಬಲ್ಲವ ಜಾಣ,
ಎಣ್ಣೆಗೆ ಬೇಕು......
4. ಅನ್ನಕೆ ಬೇಕು ಸಾರು,
ಹಾಕಲು ಬೇಕು......
5. ಮರವನ್ನು ಕಡಿಯಲು ಕತ್ತಿ,
ಬಟ್ಟೆಗೆ ಬೇಕು......
6. ಕೂಡಲು ಬೇಕು ಕುರ್ಚಿ,
ತಿವಿಯಲು ಬೇಕು......
7. ನೀರಿನಲ್ಲಿದೆ ಮೀನು,
ಅದಕೆ ಬಲೆಯೆ......
8. ಮುಖ್ಯ ಮಂತ್ರಿ ನೆಹರು,
ಸ್ತುತ್ಯ ಅವರ......

ಕೆ. ರಾಮಕೃಷ್ಣನಾಯಕ, ಮಂಗಳೂರು

### ಕಂದನಪ್ರಾಸ ಉತ್ತರ

1. ಚೆಂದ.
2. ಕೊರಳು.
3. ಗಾಣ.
4. ಇಜಾರು.
5. ಹತ್ತಿ.
6. ಬರ್ಚಿ
7. ಬೋನು.
8. ಹೆಸರು.

### ಉತ್ತರಹೇಳು ಉತ್ತರ

1. ಕಲಿನಾನ್.
2. ಫತೇಪುರ್‌ಸಿಕ್ರಿ.
3. ಲಂಡನ್.
4. ಪಂಪ.
5. ಟಿಬೆಟ್.
6. ಬೇರ್ಡ್.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1953 ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜೂಲೈ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸವುದಿಲ್ಲ. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಆಗಸ್ಟ್ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಬಾಲಕನ ಹೆಬ್ಬಯಕೆ

ಎರಡನೇ ಫೋಟೋ: ಬಾರತೀಯ ಹೆಗ್ಗಳಿಕೆ

ಕಳಿಸಿದವರು: ಶ್ರೀಮತಿ ರಮಾ, ಕಂಬಳ, ಮಂಗಳೂರು.

ಆಗಸ್ಟ ಸಂಚಿಕೆಯಲ್ಲಿ ಈ ಮೇಲಿನ ಶೀರ್ಷಿಕೆಗಳು ಬರುತ್ತವೆ. ಸದರಿ ಬಹುಮಾನದ ಮೊಬಲಗು ರೂ. 10/– ನ್ನು ಆಗಸ್ಟ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ

ಬರುತ್ತದೆ!

ವಿಜಯ ರವರ

# ಚಂದ್ರಹಾರಂ

ನಿರ್ದೇಶಕರು
ಕೆ.ಕಾಮೇಶ್ವರರಾವ್ B.A.



ನಿರ್ಮಾಪಕರು...ನಾಗಿರೆಡ್ಡಿ...ಚಕ್ರಪಾಣಿ

Printed by B. NAGI REDDI at the B. N. K. Press Ltd., Madras 26, and Published by him from Chandamama Publications, Madras 26. Controlling Editor: SRI CHAKRAPANI

Photo by J. V. Sivarama Sastry



ಬಹುಮಾನ
ಪಡೆದ ಶೀರ್ಷಿಕೆ

ಸುಧಾರಿಸಿಕೊಳ್ಳುತ್ತಾ

ಕಳಿಸಿದವರು:
ಬಿ. ಎನ್. ನಾಗೇಂದ್ರ, ಬೆಂಗಳೂರು, 3.




ಎಳೆಚಿಗುರು, ಹಣ್ಣೆಲೆ